# ಕನ್ನಡ ಪದ್ಯಗಳು

ಭಾಗ ೧

ಚಂದ್ರಹಾಸನ ಕಥೆ, ಕಿರಾತಾರ್ಜುನರ ಯುದ್ಧ,

ಇಂದುಮತಿಯ ಸ್ವಯಂವರ.

ಕನ್ನಡ ಜೈಮಿನಿ ಭಾರತದಿಂದ ಸಂಗ್ರಹಿಸಿ ಬರೆದುದು

ಮಂಗಳೂರು

ಶಾರದಾ ಛಾಪಖಾನೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು.

1921





### ಕನ್ನಡ ಜೈಮಿನಿ ಭಾರತದೊಳಗಣ

# ಚಂದ್ರಹಾಸನ ಕಥೆ.



ಇನ್ನೊರೆವೆನಾಲಿಸಾದರೆ, ಪಾರ್ಥ, ಧಾರ್ಮಿಕನು ।
ಮುನ್ನೊಬ್ಬನುಂಟು — ಕೇರಳದೇಶದವನಿಪನು, ।
ಸನ್ನುತಗುಣೋದಯನು, ಮೇಧಾವಿಯೆಂಬವನು, ಬಲಯುತನು. ಬಳಿಕವನಿಗೆ॥
ತನ್ನ ಪಟ್ಟದ ರಾಣಿಯಲಿ, ಬಹಳ ಭಾಗ್ಯ ಸಂ ।
ಪನ್ನನೆಡದಂಘ್ರಿಗರುವೆರಳಾಗಿ, ದಿವದೊಳು ।
ತ್ಪನ್ನನಾದನು ಮೂಲನಕ್ಷತ್ರದಿಂದರಿಪ್ಟಾಂಶದಲಿ ಸುಕುಮಾರನು. ॥ ೧ ॥

ಪುತ್ರೋತ್ಸವಂ ಮಾಡಿ ಕೆಲವು ದಿನವಿರೆ ನೃಪನು; ।
ಶತ್ರುಗಳು ಬಂದು ನಿಜ ನಗರವನು ಮುತ್ತಿದರೆ, ।
ಕ್ಷತ್ರಧರ್ಮದೊಳವರೊಡನೆ ಯುದ್ಧರಂಗದಲಿ ಹೊಯ್ದಾಡಿ ಮಡಿಯೆ; ಕೇಳಿ ॥
ಚಿತ್ರಭಾನುಪ್ರವೇಶವ ಗೈದಳಂದು ಶತ ।
ಪತ್ರಲೋಚನೆ ಪತಿವ್ರತೆಯಾಗಿ. ಬಳಿಕೆಲೆ ಧ ।
ರಿತ್ರೀಶ್ವರನ ರಾಜ್ಯವನು ತೆಗೆದುಕೊಂಡಹಿತರಾಳಿದರದೇಂ ಹೇಳ್ವೆನು ? ॥ ೨ ॥

ಬಳಿಕೊಬ್ಬ ದಾದಿ ಶಿಶುವನು ಕೊಂಡು ಪೊರಮಟ್ಟು, ।
ತೊಳಲಿ ಬಳಲುತ ಮೆಲ್ಲಮೆಲ್ಲನೈತಂದು, ಕುಂ ।
ತಳನಗರವನು ಹೊಕ್ಕಳಲ್ಲಿ ಸಾಕಿದಳರ್ಭಕನನತಿ ಪ್ರೇಮದಿಂದಾ. ॥
ಎಳೆಯನಿಗೆ ಬೇಕಾದುದಿಲ್ಲದಿರೆ ಮರುಗುವಳು. ।
ಹೊಳಲೊಳಗೆ ತಿರಿದು ಹೊರೆದಳಲುವಳು. ಮುದ್ದಿಸಿ ಹ ।
ಸುಳೆಯ ಬಿನದಂಗಳಿಗೆ ಹಿಗ್ಗಿ, ಬಿಸುಸುಯ್ಯುಳವಳನುದಿನದಲಾರ್ತೆಯಾಗಿ. ॥ ೩ ॥

ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ! ನಿನಗೆ ಹೊಂ ।
ದೊಡಿಗೆಯಿಲ್ಲಿರೆ ನಿಳಯವಿಲ್ಲ! ಬಿಡದೆರೆವನೀರ್ ।
ಕುಡಿವಾಲ್ಗಳೆಣ್ಣೆಬೆಣ್ಣೆಗಳಿಲ್ಲ! ಲಾಲಿಸಿ ನಲಿವ ತಂದೆತಾಯ್ಗಳಿಲ್ಲ! ॥
ಪೊಡವಿಪತಿ ಕೇರಳಾಧೀಶ್ವರನು ಹರಕೆಯಲಿ ।
ಹಡೆದನಿದಕೀಗ ನಿನ್ನನು ನೋಡುವೆನ್ನ ಕ । [॥ ೪ ॥
ಣ್ಣೊಡೆಯದಕಟಕಟೆಂದು, ಬಿಸುಸುಯ್ದುಳಲ್ದು ಮರುಗುವಳಾಕೆ ದಿನದಿನದಲಿ.

ಮೊಳೆಹಲ್ಲುಗುವ ಜೊಲ್ಲು, ದಟ್ಟತಡಿ. ತೊದಲನುಡಿ, ।
ತೊಳತೊಳಗುತಿಹ ಸೊಬಗು, ಮೆರೆವ ನಗೆಮೊಗದ ಬಗೆ, ।
ಪೊಳೆವಕಣ್, ಮಿಸುಪ ನುಣ್ಗದಪಿಗೆಣೆ ಚೆಲ್ವಹಣೆ, ಕುರುಳ ಜೋಲಂಬೆಗಾಲು,॥
ಸುಳಿನಾಭಿ, ಮಿಗೆ ಶೋಭಿಪಧರದೆಡೆ, ಬಟ್ಟದೊಡೆ, ।
ನಳಿತೋಳಿಡಿದ ಧೂಳಿ ಸೊಗಯಿಸುವ ವರ ಸಿಸುವ ।
ನಲಿದಾಡಿಸುವ ರೂಢಿಯಿಲ್ಲೆಂದು ನೆರೆನೊಂದು, ಮರುಗುವಳಜಸ್ರಮವಳು.॥ ೫ ॥

ಬಾಲಕನ ಲೀಲೆಯನು ಕಂಡು ಹಿಗ್ಗುವಳೊಮ್ಮೆ; ।
ಲಾಲನೆಗಳಿಲ್ಲೆಂದಳಲ್ದು ಮರುಗುವಳೊಮ್ಮೆ. ।
ಪಾಲಿಸಿದಳಿಂತು ನಡೆನುಡಿಗಳನು ಕಲಿವಲ್ಲಿ ಪರಿಯಂತಮಾ ಶಿಶುವನು. ॥
ಮೇಲೆ ರುಜೆ ಬಂದಡಸಿ, ವಿಧಿವಶದೊಳಾ ಧಾತ್ರಿ ।
ಕಾಲನರಮನೆಗೈದಿದಳು. ಬಳಿಕ ಹಸುಳೆಗೆ ನಿ ।
ರಾಲಂಬವಾಗಲಾ ಪಟ್ಟಣದೊಳೆಲ್ಲರಿಗೆ ಕಾರುಣ್ಯಕೀಡಾದನು. ॥ ೬ ॥

ಚೆಲ್ವ ಶಿಶು ಬೀದಿಯಲಿ ಬಂದು ದೇಸಿಗನಾಗಿ ।
ನಿಲ್ವಿನಂ, ಕಂಡಕಂಡಬಲೆಯರು ಕರೆಕರೆದು ।
ಮೆಲ್ವ ತನಿ ಹಣ್ಗಳನು ಕಜ್ಜಾಯ ಸಕ್ಕರೆಗಳನು ಕೊಡುವರೆತ್ತಿಕೊಂಡು. ॥
ಸೊಲ್ವ ಮಾತುಗಳನಾಲಿಸಿ, ಮುದ್ದಿಸುವರೀವ ।
ರೊಲ್ವುದನು; ಮಜ್ಜನವ ಗೈಸಿ, ಮಡಿಯನು ಹೊದಿಸಿ, ।
ಮೆಲ್ವಾಸಿನಲಿ ಮಲಗಿಸುವರರ್ತಿಯಿಂದೊಸೆದು ತಂತಮ್ಮ ಮಕ್ಕಳೊಡನೆ. ॥ ೭ ॥

ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ ।
ತಿರುಗುತಿಹ ಬಾಲಕನ ರೂಪವನು ಕಂಡು, ಕರೆ । [ದಿಂದಾ, ॥
ಕರೆದು ಭವನಂಗಳಿಗೆ ಕೋಂಡೊಯ್ದು, ಗಣಿಕೆಯರು ತವುತವುಗೆ ಮೋಹ-

ಸರಸ ಪರಿಮಳ ಸುಗಂಧಂಗಳನು ತಿಗುರಿ, ಕ ।
ಸ್ತುರಿಯ ತಿಲಕವನಿಟ್ಟು, ಕಮ್ಮಲರ್ ಮುಡಿಸಿ, ಕ । [ಹರು. ॥ ೮ ॥
ಪ್ಪುರವೀಳೆಯನು ಕೊಟ್ಟು, ಮಡಿತೊಡವುಗಳೊಳ್ಳಿದೆ ಸಿಂಗರಿಸಿ ಕಳುಹುತಿ-

ಆಡುವೆಳಮಕ್ಕಳೊಡನಾಡುವನು. ಲೀಲೆ ಮಿಗೆ, ।
ನೋಡುವಚ್ಚರಿಗಳನು ನೋಡುವನು. ಬಾಲಕರ ।
ಕೂಡೆ ಮನೆಮನೆಗಳೊಳಗೂಡುತಿಹನೆಲ್ಲರಿಗೆ ಮುದ್ದಾಗಿ ಮೋಹಿಸುವನು. ॥

ನೋಡುವರ ಕಣ್ಗಳೊಡನಾಡೆ ತನ್ಮೂರ್ತಿಯಿಂ ।
ದಾಡುವರ ನೆರವಿಯುಲಿ, ಕ್ರೀಡಿಸುವನಾ ಪುರದ ।
ರೂಡಿಸಿದ ಬೀದಿಯುಲಿ, ಕೋಡದೆಲ್ಲೆಡೆಯಲ್ಲಿ, ಹಸುಳೆ ಪರಪುಟ್ಟನಾಗಿ. ॥ ೯ ॥

ಬಟ್ಟೆಯುಲಿ ಪುಣ್ಯವಶದಿಂದರ್ಭಕನ ಕಣ್ಗೆ ।
ಪುಟ್ಟ ಸಾಲಗ್ರಾಮದೊಂದು ರಮಣೀಯ ಶಿಲೆ ।
ಕಟ್ಟೆಸಕದಿಂದ ಕಾಣಿಸಲದನು ತಾನೆತ್ತಿಕೊಂಡು, ಕೆಳೆಯರಿಗೆ ತೋರಿ; ॥

ಬಟ್ಟಗಲ್ಲಿಂತು ವರ್ತುಳದಿಂದ ಚೆಲ್ವಾಗಿ ।
ಹುಟ್ಟುವುದೆ? ಹೊಸತೆಂದು ಹಿಡಿದಾಡುತೊಡನೆ ಬೈ ।
ಚಿಟ್ಟುಕೊಂಬನು ಬಾಯೊಳನವರತವಿಿಸಲ್ಕೆ ತನಗೆ ಮನೆಯಿಲ್ಲವಾಗಿ. ॥ ೧೦ ॥

ತೊಳಪ ಸಾಲಗ್ರಾಮಫಲದಿಂದ ಬಾಲಕನು ।
ಕೆಳೆಮಕ್ಕಳೊಡನಾಟದಶ್ಮಗೋಳಕವೆಂದು ।
ತಿಳಿದಣ್ಣೆಕಲ್ಲೊಡ್ಡುಗಳನಾಡುತದರಿಂದ ಗೆದ್ದೆಲ್ಲರನು ಜರೆಯುತಾ; ॥

ಕಳಕಳಿಸಿ ನಗುತತಿಸ್ನೇಹದಿಂ ಕ್ರೀಡೆಯನು ।
ತಳೆದಾಗಳುಣಿಸುಗಳನುಂಬಲ್ಲಿ, ತನ್ನ ಕೈ ।
ದಳಕೆ ತಂದುಳಿದ ಹೊತ್ತಿನೊಳಾವಗಂ ಬಾಯೊಳಿರಿಸಿಕೊಂಡಿರುತಿರುವನು. ॥ ೧೧ ॥

ಕುಂತೀಕುಮಾರ, ಕೇಳಾ ಮಹಾಪತ್ತನದೊ ।
ಳಿಂತರ್ಭಕರೊಳಾಡುತಿಹ ಹಸುಳೆಗೈದು ವ ।
ವಿರ್ಗಂ ತುಂಬಿತಾ ಸಮಯದಲಿ ಪ್ರಬಲದಿಂ ಪ್ರವರ್ತಿಪ ದುಷ್ಟಬುದ್ಧಿಯೆಂಬ ॥
ಕುಂತಳೇಂದ್ರನ ಮಂತ್ರಿ ತನ್ನ ಮನೆಯಲಿ ವಿಪ್ರ ।
ಸಂತರ್ಪಣವ ಗೈಯಲಾ, ದ್ವಿಜರ್ ಭೋಜನಾ ।
ನಂತರದೊಳೈದೆ ಸತ್ಕೃತರಾಗಿ ಕುಳ್ಳಿದ್ದು, ಹರಸುತಲ್ಲಿರುತಿದ್ದರು. ॥ ೧೨ ॥

ಅಲ್ಲಿ ಕೆಳೆಯರೊಳಾಡುತಿದ್ದ ಶಿಶುವನು ಕಂಡ ।
ರುಲ್ಲಾಸದಿಂದೆಸೆವ ಭೂಸುರರು, ಬಾಲಕನ ।
ಸಲ್ಲಲಿತ ರಾಜಲಕ್ಷಣಕೆ ಬೆರಗಾದರವನಂಗವನು ನೋಡಿನೋಡಿ. ॥
ನಿಲ್ಲದನುರಾಗದಿಂದಾರ ಸುತನೀತರುಣ ।
ನೆಲ್ಲಿಂದ ಬಂದನೆಂದಾ ದುಷ್ಟಬುದ್ಧಿಯನು ।
ಮೆಲ್ಲನೆ ವಿಚಾರದಿಂ ಕೇಳ್ದೊಡಾ ವಿಪ್ರರಿಗೆ ನಗುತಾತನಿಂತೆಂದನು. ॥ ೧೩ ॥

"ಈ ಪರಿಯೊಳೆನಿತಿಲ್ಲನಾಥರಾಗಿಹ ಬಾಲ ।
ರೀ ಪುರದೊಳೆತ್ತಣವನಾವ ಸುತನೆಂದರಿಯೆ ।
ವೀಪಸುಳೆಯಂ; ರಾಜಕಾರ್ಯದೊಳಗಿಹೆವಿದರ ಚಿಂತೆ ನಮಗೇತಕೆ" ನಲು; ॥
ಆಪಾರ್ವ"ರೆಂದಿದ್ದೊಡಂ ಚಾರುಲಕ್ಷಣದೊ ।
ಳೀ ಪೊಳಲ್ಗೀಕುಂತಳಾಧೀಶನಾಳ್ವ ನ । [॥ ೧೪ ॥
ವ್ಮಾ ಪೊಡವಿಗೊಡೆಯನಹನೀತನನು ನೀನಿರಿಸಿಕೊಂಡು ರಕ್ಷಿಪುದೆಂದರು."

ಕ್ರೂರ ನಕ್ರಾಕುಲದೊಳಿಡಿದಿದ್ದ ಹೆಮ್ಮಡು ಗ ।
ಭೀರನಿರ್ಮಲಜಲದೊಳೆಸೆವಂತೆ, ಮನದಲಿ ಕ ।
ಠೋರತರಭಾವವನು ತಳೆದು, ಬಹಿರಂಗದಲಿ ವಿನಯವುಳ್ಳಾತನಾಗಿ, ॥
ಚಾರುಲಕ್ಷಣವ ಶಿಶುವನು ನೋಡಿ, ಧರೆಯ ಬೃಂ ।
ದಾರಕರ ನುಡಿಗೊಪ್ಪಿದವೊಲಿದ್ದು, ಬಳಿಕ ಸ ।
ತ್ಕಾರದಿಂದಾ ವಿಪ್ರರನು ಕಳುಹಿದನು ದುಷ್ಟಬುದ್ಧಿ ನಿಜಭವನದಿಂದ. ॥ ೧೫ ॥

ಈ ಕುಂತಳೇಂದ್ರನಿಗೆ ಸುತರಿಲ್ಲ. ರಾಜ್ಯವೆನ |
ಗೇಕಾಧಿಪತ್ಯವಾಗಿದ್ದಪುದು. ಮುಂದಿವನು |
ಭೂಕಾಂತನಾದಪನು, ಗಡ! ವಿಪ್ರರೆಂದ ನುಡಿ ತಪ್ಪದೆನ್ನಾತ್ಮಜರಿಗೆ ||
ಬೇಕಾದ ಸಂಪದವು ಬಯಲಾಗಿ ಪೋಪುದೆಂ |
ದಾ ಕುಮತಿ ಬೇರೊಂದುಪಾಯವನು ಚಿಂತಿಸಿ, ಭ |
ಯಾಕಾರದೊಡಲ ಚಂಡಾಲರನು ಕರೆಸಿ, ಬೆಸಸಿದನಾರುಮರಿಯದಂತೆ.|| ೧೬ ||

ಕಾನನಾಂತರದೊಳೀ ತರಳನನು ಕೊಂದು, ನೀ |
ವೇನಾದರುಂ ಕುರುಹು ತಂದೆನಗೆ ತೋರ್ಪುದೆಂ |
ದಾನರೇಂದ್ರನ ಮಂತ್ರಿ ಬೆಸಸಿದರೆ; ಪಶುಘಾತಕಿಗಳಾಡುತಿಹ ಶಿಶುವನು ||
ಹೀನದಯದಿಂದ ಹಿಡಿದೆತ್ತಿಕೊಂಡೊಯ್ದರು ಭ |
ಯಾನಕದೊಳಂದು ಕೊಲೆಗೆಳಸಿ ಪ್ರಹ್ಲಾದನನು |
ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರು ಬಂದು ಕೈದುಡುಕಿದಂತೆ. || ೧೭ ||

ಪಾತಕಿಗಳೊಡಲೊಳಿಹ ಪರಮಾತ್ಮನಂತೆ, ಯಮ |
ದೂತರೆಳತಟದಜಾಮಿಳನಂತೆ, ಕಾಕಸಂ |
ಘಾತದಲಿ ಸಿಕ್ಕಿದ್ದ ಕೋಗಿಲೆಯ ಮರಿಯಂತೆ, ನಲುಗಿ ಕತ್ತಲೆಯೊಳಿದ್ದ ||
ಶೀತಳಮರೀಚಿ ಲಾಂಛನದಂತೆ, ಬಹಳ ಕೋ |
ಪಾತಿಶಯದೊಳಗಿಹ ವಿವೇಕದಂತಾಗ ಪಶು |
ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿದ್ದ ನಡುವೆಯೊಳಂಜುತಳುತ. || ೧೮ ||

ಹೆಗಲೊಳೇರಿಸಿ ಬನಕೆ ಚಂಡಾಲರೊಯ್ಯುತಿರೆ, |
ಮಿಗೆ ಬೆದರಿ ಭಯದಿಂದ ಬಾಲಕನು ಬಾಯೊಳಾ |
ವಗವಿರಿಸಿಕೊಂಡಿರುವ ದಿವ್ಯಸಾಲಗ್ರಾಮದುಪಲದತಿ ಮಹಿಮೆಯಿಂದ ||
ಬಗೆದೋರಲಾಗ, ಮುರಹರ, ಕೃಷ್ಣ, ಕಮಲಾಕ್ಷ, |
ಖಗರಾಜಗಮನ, ಸಲಹೆಂದು ಚೀರಿದೊಡವನ |
ಮೊಗನೋಡಿ,ಕರುಣದಿಂ ಕಡಿಗರೆದೆ ಕರಗಿದುದದೆಂತೊ ಹರಿನಾಮದೇಳ್ಗೆ!||೧೯||

ಒಯ್ದು ಹಸುಳೆಯನರಣ್ಯದೊಳಿರಿಸಿ, ಮರುಗಿ, ಬಿಸು ।
ಸುಯ್ದು ಪಶುಘಾತಕಿಗಳಾ ದುಷ್ಟಬುದ್ಧಿಯನು ।
ಬಯ್ದು, ಶಿಶುವಧೆಗಳ್ಕಿ ನಿಂದು ನೋಡುತ ಕಂಡರರ್ಭಕನೆಡದ ಕಾಲಲಿ ॥
ಅಯ್ದಲ್ಲದೊಂದು ಬೆರಳಿರುವುದನು ಬಳಿಕದನು ।
ಕೊಯು, ಕುರುಹನು ಕೊಂಡು, ತಮ್ಮ ದಾತಾರನೆಡೆ । [॥ ೨೦ ॥
ಗೆಯ್ದಿ, ತೋರಿದೊಡವನವರ್ಗಳನು ಮನ್ನಿಸಿ ಮಹೋತ್ಸವದೊಳಿರುತಿದ್ದನು.-

ಇತ್ತಲಾ ವಿಪಿನದಲಿ ತನ್ನ ವದನದೊಳಿದ್ದ ।
ವೃತ್ತಸಾಲಗ್ರಾಮಶಿಲೆಯ ಪ್ರಭಾವದಿಂ ।
ದುತ್ತಮಶ್ಲೋಕನಂ ಭಜಿಸೆ, ದಯೆಗೈದೆಡದ ಕಾಲ ಷಷ್ಠಾಂಗುಳಿಯನು ॥
ಕತ್ತರಿಸಿಕೊಂಡುಳುಹಿ ಹೋದರಂತ್ಯರ್. ಬಳಿಕ ।
ತುತ್ತಿಸಿದ ರಾಹು ತೊಲಗಿದ ಶಶಿವೊಲಿದ್ದನವ ।
ನೆತ್ತಣದು ಬಾಧೆಗಳು, ನರ, ನಿನ್ನ ಮಿತ್ರನನು ಮರೆಹೊಕ್ಕ ಜೀವಿಗಳ್ಗೆ ? ॥ ೨೧ ॥

ಬಸಿವ ನೆತ್ತರಗಾಯದೆಡದಡಿಯ ವೇದನೆಗೆ ।
ಹಸುಳೆ ಹರಿಹರಿಯೆಂದೊರಲ್ದಳುತಿರಲು, ಕಣ್ಣೊ ।
ಳೊಸರ್ವ ಬಾಷ್ಪಂಗಳನು ಕಂಡು ಮಿಗಹಕ್ಕಿಗಳು ನೊಂದು ಕಡುಶೋಕದಿಂದ,॥
ಹಸಿವು ನೀರಡಿಕೆಯನು ತೊರೆದಲ್ಲಿ ನಿಂದುಪಚ ।
ರಿಸುತಿದ್ದುವಾ ಶಿಶುವನೆಂದೊಡೆಲೆ, ಪಾರ್ಥ, ಕೇಳ್ । [ಲ್ಲೇ ? ॥ ೨೨ ॥
ವಸುಮತಿಯೊಳಾರ್ತರನು ನೋಡಿ, ಮಿಗೆ ಮರುಗದಿಹ ಮಾನವನು ಪಾಪಿಯ-

ಗರಿಗೆದರಿ ಕೊಡೆಹಿಡಿದು ನಿಂದುವು ಬಿಸಿಲ್ಗೆ ನವಿ ।
ಲೆರಕೆಯನು ಬೀಸಿ, ಬಿಜ್ಜಣವಿಕ್ಕಿತಂಚೆ. ತುಂ ।
ತುರನುದಿರ್ಚಿತು ಸಾರಸವು ಸಲಿಲದಲಿ ನನೆದ ಪಕ್ಕಂಗಳನು ಬಿದಿರ್ಚಿ. ॥
ಮರುಗಿ ಮೆಲ್ನುಡಿಯೊಳುಪಚರಿಸಿದುವು ಗಿಳಿಗಳ ।
ಕ್ಕರೊಳಳಿಗಳರ್ಭಕನ ರೋದನದ ಕೂಡಳುವ ।
ತೆರದಲಿ ಮೊರೆದುವಲ್ಲಿ, ಕರುಬರಿದ್ದೂರಿಂದ ಕಾಡೊಳ್ಳಿತೆನಿಸುವಂತೆ. ॥ ೨೩ ॥

ಕೋಗಿಲೆಯ ನಿಡು ಸರಂ, ಪಾರಿವದ ಕಲ್ಲುಣಿಸು, ।
ಗೂಗೆಗಳ ಕಣ್ಬೊಳಸು, ಬಕನ ಮೌನದ ಬೆರಗು, ।
ನಾಗದ ನಿರಾಹಾರ, ಅಳಿಗಳ ಪರಿಭ್ರಮಣ, ಇಭದ ಸೀತ್ಕಾರಂಗಳು, ॥
ಹೋಗಲಡಿಯಿಡಲರಿಯದಾರೈವ ಜನವಿಲ್ಲ ।
ದಾ ಗಹನಗಹ್ವರದೊಳಳುವ ಶಿಶುವನು ನೋಡ ।
ಲಾಗಿ ಬಂದೆಡೆಗೊಂಡ ದುಃಖಾತಿರೇಕವೆಂಬಂತೆ ಕಾಣಿಸುತಿದ್ದುದು. ॥ ೧೪ ॥

(ಹೀಗೆ ಹಸುಳೆಯು ಕಾಡಿನಲ್ಲಿ ರೋದಿಸುತ್ತಿರಲು, ಕುಳಿಂದನೆಂಬ ಅರಸನು ಬೇಟೆಯಾಡುತ್ತಾ ಬೇಟೆಯವರೊಡನೆ ಅದೇ ಕಾಡಿಗೆ ಬಂದನು.)

ಆ ಕುಳಿಂದನು ದುಷ್ಟಬುದ್ಧಿಯ ನಿಯೋಗದಿಂ ।
ದಾಕಾನನದ ನಾಡ ವಳಿತವನು ಕೈಕೊಂಡು ।
ಭೂಕಾಂತನಾಗಿಹನು ಚಂದನಾವತಿಯೆಂಬ ಪುರದೊಳವನರ್ತಿಯಿಂದ ॥
ಈ ಕಿರಾತಪ್ರಕರದೊಡನೆ ಪೊರಮಟ್ಟು, ಮೃಗ ।
ಯಾಕಾಮನಾಗಿ ಬಂದಿದ್ದವನು ಪಿಡಿದೋಡು ।
ವಾ ಕುರಂಗದ ಬೆನ್ನನೈದಿದನು, ತೇಜಿಯ ಜವವು ಗಾಳಿಯನು ಮುಂಚಲು.॥೧೫॥

ಇಳಿದು ನಿಜ ವಾಜಿಯನು, ಸಾರ್ದು ಮೈದಡವಿ ಬರೆ ।
ಸೆಳೆದು, ಬಿಗಿಯಪ್ಪಿ ಕಂಬನಿ ತೊಡದು, ಕೊಡೆ ಸ ।
ಗ್ಗಳೆಯ ನೀರಿಂದ ಕಾಲ್ಬುದಿಯಲಿ ಬಸಿವ ನೆತ್ತರನು ತೊಳೆದು ಮೋಹದಿಂದ, ॥
ಗಳದೊಳುಬ್ಬುವ ಗದ್ಗದಂಗಳನು 'ನೈತಿಟ್ಟು, ।
ತಿಳಿಸಿ ಲಾಲಿಸಿದನು ಕುಳಿಂದಕನು ಸೌಭಾಗ್ಯ । [ ॥ ೧೬ ॥
ನಿಳಯುದರಕೆಯ ವಸುವನೊದವಿದಗ್ಗದ ಪುಣ್ಯದೊಡಲಸುವನಾಪಿಸುವನು.-

ಮೃಗಯಾವ್ಯಸನದಿಂದ ಕಾನನಕೆ ತಾಂ ಕೃಷ್ಣ ।
ಮೃಗದ ಕೂಡೈದಲುರೆ, ದೊರೆಕೊಂಡನೀ ಕೃಷ್ಣ ।
ಮೃಗಭಾವದರ್ಭಕನು; ಪಾಪಕೆಳಸಿದೊಡಾಯ್ತು ಪುಣ್ಯವೆನುತಲ್ಲಿ ಮಡಿದ ॥

ಮೃಗಜಾತಿಗಳನವರವರ್ಗೆ ಪಚ್ಚಿಸಿ, ನೆರೆದ ।
ಮೃಗಜೀವಿಗಳನೆಲ್ಲರನು ಕಳುಹಿ, ನಿಜಪುರಕೆ । [ದಲಿ. ॥ ೨೭ ॥
ಮೃಗಧರನೊಲಿಸೆವ ಶಿಶುವನು ಕೊಂಡು, ಪರಿಜನರೊಡನೆ ಬಂದನುತ್ಸವ-

ಮುಂದೆ ಪರಿತಂದು ಚರರರಿಪೆ, ಸಿಂಗರಿಸಿದರ್. ।
ಚಂದನಾವತಿಗೆ ಸಂಭ್ರಮದಿಂ ಕುಳಿಂದಕನು ।
ಬಂದು, ನಿಜ ಭವನವನು ಹೊಗಲಿದಿರ್ವಂದು ನಲಿದವನ ಸತಿ ಮೇಧಾವಿನಿ, ॥
ಕಂದನನು ತೆಗೆದೆತ್ತಿಕೊಳುತ ಬಿಗಿಯುಪ್ಪಿ, ಸಾ ।
ನಂದದಿಂ ಹೊರೆ ಏರಿದಳ್ ತನ್ನ ಬಂಜೆತನ ।
ವಿಂದು ಹೋದುದು ಪುತ್ರವತಿಯಾದೆ ತನ್ನ ಪುಣ್ಯದ್ರುಮವು ಫಲಿಸಿತೆಂದು.॥೨೮॥

ಕತ್ತಲೆಯ ಮನೆಗೆ ಮಣಿದೀಪವಾದಂತೆ, ಸಲೆ ।
ಬತ್ತಿದ ಸರೋವರಕೆ ನವಜಲವೊದವಿದಂತೆ, ।
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿ ನೆಗಳ್ದಂತೆ, ಭೂತಳದಲಿ ॥
ಮತ್ತೆ ಸಂತಾನವಿಲ್ಲದ ಕುಳಿಂದನ ಬಾಳ್ಕೆ ।
ಗುತ್ತಮಕುಮಾರನಾದನು ಚಂದ್ರಹಾಸನೆನ ।
ಲುತ್ತರೋತ್ತರವಪ್ಪುದಚ್ಚರಿಯೆ ಸುರಪುರದ ಲಕ್ಷ್ಮೀವರನ ಭಕ್ತರು? ॥ ೨೯ ॥

ಮೆಲ್ಲನಿಂತಿರಲೆಂಟನೆಯ ವರ್ಷವಾಗಲ್ಕೆ ।
ನಿಲ್ಲದುಪನಯನವನು ವಿರಚಿಸಿ, ಕುಳಿಂದನು ಸ ।
ಮುಲ್ಲಾಸವನು ತಾಳ್ದನಂಗಸಹಿತಖಿಳ ವೇದಂಗಳನು, ನೀತಿಗಳನು, ॥
ಸಲ್ಲಲಿತ ಶಬ್ದಾದಿ ಶಾಸ್ತ್ರ ಸಿದ್ಧಾಂತಂಗ ।
ಳೆಲ್ಲವನು, ಗುರುಮುಖದೊಳಧಿಕರಿಸಿ, ಬೇಕಾದ ।
ಬಿಲ್ಲವಿದ್ಯೆಯನರಿದು ಗಜತುರಗತೇರಾಟದಲಿ ಚತುರನಾದನವನು. ॥ ೩೦ ॥

ಷೋಡಶಪಪ್ರಾಯದೊಳವನು ಪ್ರಬಲಬಲನಾಗಿ, ।
ಮೂಡಿದಗ್ಗಳಿಕೆಯಿಂದೈದೆ ರಥಿಕರ್ಕಳನು ।
ಕೂಡಿಕೊಂಡೈದಿ, ನಿಜತಾತನಿಗೆ ಮಲೆವ ಮನ್ನೆಯರೆಲ್ಲರನು ಘಾತಿಸಿ ॥

ಮಾಡಿದನು ದಿಗ್ವಿಜಯವನು; ಕುಳಿಂದಕನಾಳ್ವ ।
ನಾಡಲ್ಲದೆಸ್ಸೆಯ ಸೀಮೆಗಳನೊತ್ತಿದನು; ।
ಹೂಡಿಸಿದನವರವರ ಮನೆಗಳ ಸುವಸ್ತುಜಾಲಂಗಳನು ತನ್ನ ಪುರಕೆ. ॥ ೨೧॥

ಈ ತೆರದೊಳಿರೆ ಕುಳಿಂದನು ಚಂದ್ರಹಾಸನನು ।
ಪ್ರೀತಿಯಿಂದಂ ಕರೆದು ನುಡಿದ"ನೆಲೆ, ಮಗನೆ, ವಿ ।
ಖ್ಯಾತವಾಗಿಹ ರಾಜಧಾನಿ ಕುಂತಳವಿಲ್ಲಿಗಾರು ಯೋಜನದಲಿಹುದು. ॥
ಭೂತಳವಿದಾ ನಗರದರಸಿನದು. ನಮಗೊಡೆಯ ।
ನಾತನ ಶಿರಃಪ್ರಧಾನನು ದುಷ್ಟಬುದ್ಧಿ. ಸಂ ।
ಜಾತವಸ್ತುಗಳ ಸಿದ್ಧಾಯವನು ಕೊಡವೇಳ್ಪುದರಸನಿಗೆ ನಾವೆ"ಂದನು. ॥೨೨॥

"ರಾಯನಿಗೆ ವರ್ಷವರ್ಷಕೆ ನಾವು ಕೊಡುವ ಸಿ ।
ದ್ಧಾಯವನು, ದುಷ್ಟಬುದ್ಧಿಗೆ ಸಲಿಸಿ ಬರುವ ನಿ ।
ಷ್ಕಾಯುತ ದ್ರವ್ಯವನು, ನೃಪನ ರಾಣಿಗೆ ಪುರೋಹಿತನಾದ ಗಾಲವನಿಗೆ ॥
ಪ್ರೀಯದಿಂದುಪಚರಿಸುವರ್ಥವನು, ತತ್ಕಾಲ ।
ಕೀಯಬೇಕೆಲೆ, ಮಗನೆ. ಧನವನೊದವಿಸಿ ಕಳುಹ ।
ಸೂಯೆಗೀಡಾಗಬೇಡೆಂದು"ನಿಜ ನಂದನನಿಗಾ ಕುಳಿಂದನು ಹೇಳ್ದನು. ॥ ೨೩ ॥

ಪಿತನ ಮಾತನು ಕೇಳಿ, ಚಂದ್ರಹಾಸನು ಮಹೀ ।
ಪತಿಗೆ, ಮಹಿಷಿಗೆ, ಮಂತ್ರಿ ದುಷ್ಟಬುದ್ಧಿಗೆ, ಪುರೋ ।
ಹಿತಗಾಲವನಿಗೆ, ಸಲಿಸುವ ಧನವನದರ ಸಂಗಡಕೆ ತಾನಾಹವದಲಿ ।
ಪ್ರತಿ ಭೂಪರನು ಜಯಿಸಿ ತಂದವಸ್ತುಗಳನಂ ।
ಕಿತದಿಂದ ಕಟ್ಟಿ, ಶಕಟೋಷ್ಟ ಕರಿವಾಜಿಗಳ ।
ಶತಸಂಖ್ಯೆಯಿಂದ ಕಳುಹಿದನಾಪ್ತರನು ಕೂಡಿಕೊಟ್ಟು ಕುಂತಳನಗರಿಗೆ. ॥೨೪॥

(ಆ ಚರರು ಕುಂತಳನಗರಕ್ಕೆ ಬಂದು, ಮಂತ್ರಿಯಾದ ದುಷ್ಟಬುದ್ಧಿಯನ್ನು ಕಾಣಲು ಅವನು ಅವರೊಡನೆ ವಿಚಾರಿಸುವನು; ಹೇಗೆಂದರೆ:)

"ಏನಿದೆತ್ತಣ ಕೌತುಕದ ನುಡಿ! ಕುಳಿಂದನಿಗೆ ।
ಸೂನು ಜನಿಸಿದ್ದನೇ! ಬಂಜೆಯಾಗಿಹಳವನ ।
ಮಾನಿನಿ ವಿಚಿತ್ರ"ವೆನಲಾ ಚರರ್ "ಜೀಯ ಹುಸಿಯಲ್ಲವಿದು ಬೇಟೆಗೈದೆ, ॥
ಕಾನನದ ಮಧ್ಯದೊಳನಾಥನಾಗಿಹ ಶಿಶುನಿ ।
ಧಾನವಿರೆ ಕಂಡೆತ್ತಿಕೊಂಡು, ಬಂದಾತ್ಮಜನಿ ।
ಧಾನದಿಂದೋವಿದನು ಪ್ರೀತಿ ಮಿಗೆ ಚಂದ್ರಹಾಸಾಭಿಧಾನದೊಳಂ"ದರು. ॥೩೫॥

ಕೇಳಿ ವಿಸ್ಮಿತನಾದನಾ ದುಷ್ಟಬುದ್ಧಿ. "ನಾಂ ।
ಹಾಳಡವಿಯಲಿ ಹಸುಳೆಯನು ಕೊಂದು ಬಹುದೆಂದು ।
ಹೇಳಿದರೆ, ಚಂಡಾಲರಂದುಳುಹಿ ಬಂದರಹುದೆಂ"ದು ನಿಶ್ಚೈಸಿ, ಬಳಿಕ ॥
ತಾಳಿದನು ದ್ವೇಷವನು ಚಿತ್ತದಲಿ. ಹೊರಗೆ ಕರು ।
ಣಾಳುಗಳ ತೆರದಿಂದವರ್ಗಳನು ಮನ್ನಿಸಿ, ನಿ ।
ಜಾಲಯಕೆ ತೆಗೆಸಿದನು ಚಂದ್ರಹಾಸನು ಕಳುಹಿದಗಣಿತ ಸುವಸ್ತುಗಳನು. ॥೩೬॥

ಮನ್ನಿಸಿ ಕುಳಿಂದಕನ ಚರರನು ಕಳುಹಿ, ಮಂತ್ರ ।
ಭಿನ್ನವಾಗದವೊಲರಮನೆಗೆ ಬಂದಾಗ, ತಾ ।
ನುನ್ನಿಸಿದ ಬಗೆಯನಾಲೋಚಿಸಿ, ನೃಪಾಲನನು ಬೀಳ್ಕೊಂಡು, ಮದನನೆಂಬ ॥
ತನ್ನ ತನಯನ ಮೇಲೆ ರಾಜ್ಯಕಾರ್ಯದ ಭಾರ ।
ವನ್ನಿಯೋಜಿಸಿ, ದುಷ್ಟಬುದ್ಧಿ ಪೊರಮಡುತಿದ್ದ ।
ನನ್ನೆಗಂ ವಿಷಯಾಭಿಧಾನದಿಂದೆಸೆವ ನಿಜಸುತೆ ಭರದೊಳೈತಂದಳು. ॥ ೩೭ ॥

"ತಾತ, ನಂದನದೊಳಾಂ ನೀರ್ಹೊಯ್ದು ಬೆಳೆಯಿಸಿದ ।
ಚೂತಲತೆ ಹೂತುದಿನ್ನುದ್ಯಾಪನವಗೈಸ ।
ದೇತಕಿದ್ದಪೆ? ರಾಜ್ಯಕಾರ್ಯಮೇನೆಂ"ದು ತಲೆವಾಗಿ, ನಸುಲಜ್ಜೆಯಿಂದ ॥
ಮಾತನಾಡುವ ಮಗಳ ಭಾವವನು ಕಂಡು, ಸಂ ।
ಪ್ರೀತಿಯಿಂ ತಿಳಿಸಿ, ವೈದಡವಿ ಮುದ್ದಿಸಿ, ತನ್ನ [ನು. ॥ ೩೮ ॥
ಜಾತ ಮದನಂಗವಳ ನೋಂಪಿಯನು ಮಾಡಿಸೆಂದಾ ಮಂತ್ರಿ ನೇಮಿಸಿದ-

ಮನೆಗೆ ಮಗಳನು ಕಳುಹಿ, ರಾಜ್ಯಕಾರ್ಯಕ್ಕೆ ಮದ ।
ನನಿಗಿರಿಸಿ, ತನ್ನ ಪರಿಜನ ಸಹಿತ ಪೊರಮಟ್ಟು ।
ದಿನವೆರಡಕ್ಕೈತಂದು, ಮುನ್ನಿದ್ದ ಕಾಡೆಲ್ಲ ಎಸೆವ ನಾಡಾಗಿರಲ್ಕೆ; ॥
ಮನದಲಿ ಕರುಬನಾಂತು ಮೆಚ್ಚಿದವನಾಗಿ, ಲೇ ।
ಸಿನೊಳಾ ಕುಳಿಂದಕನಿದಿರ್ವಂದು ಸತ್ಕರಿಸೆ, ।
ಘನ ವಿಭವದಿಂದ ರಾಜಿಪ ಚಂದನಾವತಿಗೆ ಬಂದನಾ ದುಷ್ಟಬುದ್ಧಿ. ॥ ೩೯ ॥

ರಿಪುಮಥನ, ಕೇಳ್! ಕುಳಿಂದನು ಬಹಳ ವಿಭವದೊ ।
ಳುಪಚರಿಸಿ, ತನ್ನ ನಂದನ ಚಂದ್ರಹಾಸನನು ।
ವಿಪುಲ ಪರಿತೋಷದಿಂದೊಡೆಯನಿಗೆ ಕಾಣಿಕೆಯನಿಡಿಸಿ ಕಾಣಿಸಿದ ಬಳಿಕ; ॥
ವಿಪಿನದಲಿ ತನಗಾ ಕುಮಾರಕನು ಮುಂಗೈದ ।
ತಪದ ಫಲದಿಂ ತಾನೆ ದೊರೆಕೊಂಡನಾತನನು ।
ಕೃಪೆಯಿಂದ ತಾವೆ ಪಾಲಿಸಬೇಕೆನುತ್ತ ನಿಜಪತಿಗೆ ಕೈವರ್ತಿಸಿದನು. ॥ ೪೦ ॥

ಗಾಡಿಸಿದ ನೃಪಲಕ್ಷಣದ ಚಂದ್ರಹಾಸನನು ।
ನೋಡಿ ವಿಸ್ಮಿತನಾಗಿ, ತನ್ನ ಮನದಲಿ ಹಿಂದೆ ।
ಮಾಡಿಸಿದ ಕೃತ್ಯವನು ನೆನೆದು, ವಂಚಿಸಿದರೇ ಚಂಡಾಲರೆಮ್ಮನೆಂದು ॥
ಕೂಡೆ ಮಮ್ಮಲ ಮರುಗಿ, ಹುಸಿಗೆ ನಸುನಗುತ ಕೊಂ ।
ಡಾಡಿ ಮನ್ನಿಸಿ, "ನನಗೆ ನಿನ್ನ ಸುತನನು ಕಂಡು ।
ಮೂಡಿತುತ್ಸವವೆಂ"ದನಾ ದುಷ್ಟಬುದ್ಧಿ ವಿನಯದೊಳಾ ಕುಳಿಂದನೊಡನೆ.॥೪೧॥

ಎತ್ತ ಬಲ್ಲರ್ ಸುಜನರೆಲೆ, ಪಾರ್ಥ, ಕಪಟಿಗಳ ।
ಚಿತ್ತದಲಿ ಹುದುಗಿದ್ದ ಮಾಟವನು? ವೀಳೆಯುವ ।
ನಿತ್ತು ಮನ್ನಿಸಿ, ಮಂತ್ರಿಪತಿ ಚಂದ್ರಹಾಸನನು ಕರೆದು ಕುಳ್ಳಿರಿಸಿಕೊಂಡು; ॥
ಮತ್ತೆ ಮನದಲಿ ಮುನ್ನ ಭೂಸುರರ್ ತನಗೆಂದ ।
ವೃತ್ತಾಂತವನು ನೆನೆದು, "ನನ್ನ ಸುತರಾಳ್ಕೆಗಾ ।
ಯಿತ್ತು ಕಂಟಕವಕಟ! ಹಗೆಯಾದನಿವನೊಬ್ಬನೆಂ"ದು ಚಿಂತಿಸುತಿದ್ದನು.॥೪೨॥

ರಾಕಾಶಶಾಂಕನಭ್ಯುದಯವನು ಕೆಡಿಸಿ, ತ ।
ನ್ನಾಕಾರವನು ತೋರಿಸುವೆನೆಂಬ ಕತ್ತಲೆವೊ ।
ಲಾ ಕಮಲಲೋಚನನ ಭೃತ್ಯನನು ಕೊಲಿಸಿ, ತಾಂಬಾಳ್ವೆನೆಂಬುಜ್ಜುಗದಲಿ. ॥

ಆ ಕುಮತಿಯುಹ ಮಂತ್ರಿ ಬಳಿಕೊಂದು ಲೇಖನವ ।
ನೇಕಾಂತದಲಿ ಬರೆದು ಮೇಣದಕೆ ಮುದ್ರೆಯನು ।
ಜೋಕೆಯಿಂದಳವಡಿಸಿ, ಶಶಿಹಾಸನನು ನೋಡಿ, ನಸುನಗುತ್ತಿಂತೆಂದನು.॥ ೪೩॥

"ಉರ್ವಮಂತ್ರದ ಕಜ್ಜವಿದು, ಚಂದ್ರಹಾಸ, ನೀ ।
ನೊರ್ವನೆ ಹಯಾರೂಢನಾಗಿ, ನಾಲ್ವರ್ ಸೇವ ।
ಕರ್ವೆರಸಿ, ರಾಜಧಾನಿಗೆ ಹೋಗಿ, ನನ್ನ ಮಗ ಮದನನಿಗೆ ಮುದ್ರೆಸಹಿತ ॥

ಸರ್ವಜನ ಅರಿಯದಂತೀವುದೀ ಪತ್ರಿಕೆಯ ।
ನುರ್ವರೆಯೊಳಾವೆಸಗಿದತಿಶಯದ ಮಾಳ್ಕೆ ನಂ ।
ಮಿರ್ವರಲಿ ಗುಪ್ತವಾಗಿರಲೆಂ"ದು ಕೊಟ್ಟನಾ ಮಂತ್ರಿ ತಲ್ಲೇಖನವನು. ॥೪೪॥

ಪ್ರೀತಿಯಿಂ ಹೇಳ್ದನಂತಸ್ಥವನು ತನ್ನೊಳೀ ।
ಮಾತು ನಿಶ್ಚಯವೆಂದು ನಂಬಿ ಕೈಕೊಂಡು, ಹ ।
ರ್ಷಾತಿಶಯದಿಂದ ಮಂತ್ರಿಗೆ ಮಣಿದು, ಬೀಳ್ಕೊಂಡು ವಂದಿಸಿ ಕುಳಿಂದನಡಿಗೆ,॥

ಆತನಲಿ ಹರಕೆವೆತ್ತೊಡನೆ ಕಳುಹಿಸಿಕೊಂಡು, ।
ಮಾತೆ ಮೇಧಾವಿನಿಗೆ ಬಂದು ನಿರ್ಗಮವನಾ ।
ಖ್ಯಾತಿಸಿ, ಪದಾಂಬುಜಕೆ ಹಣೆಯಿಟ್ಟನಾ ಚಂದ್ರಹಾಸನಭ್ಯಗ್ರದಿಂದ. ॥ ೪೫ ॥

ಹಯವರ ಸಮಾರೂಢನಾಗಿ ಸೇವಕಚತು ।
ಷ್ಟಯದೊಡನೆ ಸೂಚಿತ ಶುಭೋದಯದ ಶಕುನಾವ ।
ಳಿಯನಾಲಿಸುತ, ಬಟ್ಟೆಹಿಡಿದು ಕುಂತಳಪುರದ ಬಾಹ್ಯೋಪವನಕೆ ಬರಲು; ॥

ನಯಸರದ ಕೋಗಿಲೆಯ ಸಾದರದ ನುಡಿಯೊಳತಿ ।
ಶಯಫಲೋತ್ಕರದ ತರುಶಾಖೆಗಳ ಕೈಗಾಣಿ ।
ಕೆಯೊಳಿದಿರ್ಗೊಳ್ಳುವೋಲಾವನವು ಚಂದ್ರಹಾಸನ ಮುಂದೆ ಕಣ್ಗೆಸೆದುದು.॥೪೬॥

ತೇಜಿಯನು ಕಟ್ಟಿದೆಡೆಯಲಿ ಸೇವಕರನಿರಿಸಿ, ।
ರಾಜವನವನು ಹೊಕ್ಕು, ಶಶಿಹಾಸನಲ್ಲಿ ವಿ ।
ಭ್ರಾಜಿಸುವ ನಿರ್ಮಲ ಸರಸ್ತೀರದಲ್ಲಿ ಮಿಂದು, ಶುಚಿಯಾಗಿ ಸುಸ್ಥಳದಲಿ ॥
ರಾಜೀವವಾದಿಯಾದಲರ್ಗಳನು ತಿರಿದು, ಹರಿ ।
ಪೂಜೆಯನು ಮಾಡಿ, ತಾಂ ತಂದ ಪಾಥೇಯವನು ।
ಭೋಜನವ ಗೈದು, ವಿಶ್ರಮನಾಗಿ ತಳಿತ ಮಾಮರನ ನೆಳಲನುಸಾರ್ದನು॥೪೭॥

ಕುಂತೀಕುಮಾರ, ಕೇಳ್, ಚಂದ್ರಹಾಸನು ಬನದೊ ।
ಳಿಂತು ಸುಖನಿದ್ರೆಯಿಂದಿರುತಿರುವ ಸಮಯದಲಿ ।
ಕುಂತಳೇಂದ್ರನಿಗೆ ಚಂಪಕಮಾಲಿನೀ ನಾಮದೊಬ್ಬ ಮಗಳುಂಟವಳಿಗೆ ॥
ಸಂತತವು ಮಂತ್ರಿಸುತೆ ವಿಷಯೆ ಸಖಿಯಾಗಿರುವ ।
ಳಂತರಿಸದವರಿಬ್ಬರುಂ ಬಂದರಲ್ಲಿಗೆ, ವ ।
ಸಂತಕಾಲವು ಪ್ರಾಪ್ತವಾಗಿರೆ, ಜಲಕ್ರೀಡೆಗಾಳಿಯರ ಗಡಣದಿಂದ. ॥ ೪೮ ॥

ಬಳಿಕೊಬ್ಬರೊಬ್ಬರಂ ನೋಡುತ್ತ ಕೂಡುತ್ತ, ।
ನಲವಿಂದ ನೃತ್ಯವನು ಮಾಡುತ್ತ ಹಾಡುತ್ತ,
ಸೆಳಸಿ ಸರಸೋಕ್ತಿಗಳನಾಡುತ್ತ, ತೀಡುತ್ತ ಬೆಳ್ದಿಗೆಯ ಬೆಡಗುಗಳನು, ॥
ಅಲರ್ಗಳನು ತೆಗೆತೆಗೆದು ನೀಡುತ್ತ ಸೂಡುತ್ತ, ।
ಲಲಿತಮಧುಜಪಕವನು ಬೇಡುತ್ತ ಕಾಡುತ್ತ, ।
ಕಳೆಗಳ ವಿಲಾಸವನು ಹೂಡುತ್ತ ಕೂಡುತ್ತ ಕಣ್ಗೆಸೆದರಾ ಹೆಣ್ಗಳು. ॥ ೪೯ ॥

ಆಳಿಯರೊಳಿಂತು ಚಂಪಕಮಾಲಿನಿಗೆ ಸರಸ ।
ಕೇಳಿ ವೆಗ್ಗಳಿಸಿದ್ದ ಸಮಯದೊಳಲರ್ ಕೊಯ್ವ ।
ಚೇಳಂಬದಿಂದ ಕೆಲಸಿಡಿದು, ಬಂದಾ ವಿಷಯೆ ಚೂತದ್ರುಮದ ನೆಳಲಲಿ—॥
ತೋಳ ತಲೆಗಿಂಬಿಸ, ತಳಿರ್ವಸೆಯ ಮೇಲೆ ತಂ ।
ಗಾಳಿಗೊಡ್ಡಿದ ಮೆಯ್ಯ ಸೊಗಸಿಂದ, ಮೆರೆದು ನಿ ।
ದ್ರಾಲೋಲನಾಗಿ ಮಲಗಿಹ ಚಂದ್ರಹಾಸನನು ಕಂಡು ಸೈವೆರಗಾದಳು. ॥೫೦॥



ಸುತ್ತನೋಡುವಳೊಮ್ಮೆ. ನೂಪುರವಲುಗದಂತೆ ।
ಹತ್ತೆಸಾರುವಳೊಮ್ಮೆ. ಸೋಕಲೆಂತಹುದೆಂದು ।
ಮುತ್ತೆ ಮುರಿದಪಳೊಮ್ಮೆ. ಹಜ್ಜೆಹಜ್ಜೆಯು ಮೇಲೆ ಸಲ್ವಳವ್ಮದೆ ನಿಲ್ವಳು. ॥
ಚಿತ್ತದಲಿ ನಿಶ್ಚೈಸಿ ನುಡಿಯುಲೆಳಸುವಳೊಮ್ಮೆ. ।
ಹೊತ್ತಲ್ಲದನುಚಿತಕೆ ಬೆದರಿ ಹಿಂಗುವಳೊಮ್ಮೆ. ।
ತತ್ತಳದ ಬೇಟದಲಿ ಬೆಂಡಾಗಿ ವಿಷಯೆ ನಿಂದಿದ್ದಳಾತನ ಹೊರೆಯಲಿ. ॥೫೧॥

ದಿವಿಜೇಂದ್ರತನಯ, ಕೇಳೀ ತೆರದಲಾಗ ನವ ।
ಯುವತಿ ನಿಂದೀಕ್ಷಿಸುತ ಕಂಡಳವನಂಗದಲೆ ।
ಸೆವ ರುಚಿರ ಕಂಚುಕದ ತುದಿಸೆರಗಿನಲಿ ಕಟ್ಟಿಕೊಂಡಿದ್ದ ಪತ್ರಿಕೆಯನು;
ತವಕದಿಂ ಬಿಟ್ಟು ಮುದ್ರೆಯನೋಸರಿಸಿ ತೆಗೆದು, ।
ವಿವರದಲಿ ತನ್ನ ತಂದೆಯ ಹೆಸರ ಬರಹವಿರೆ, । [॥ ೫೦ ॥
ಲವಲವಿಕೆ ಮಿಗೆ, ನೋಡಿ ಹರ್ಷಪುಲಕದಲಂದು ನಿಂದೋದಿಕೊಳುತಿದ್ದಳು. ॥

ಶ್ರೀಮತ್ಸಚಿವಶಿರೋಮಣಿ ದುಷ್ಟಬುದ್ಧಿ ಸು ।
ಪ್ರೇಮದಿಂ ತನ್ನ ಮಗ ಮದನನಿಗೆ ಮಿಗೆ ಹರಸಿ ।
ನೇಮಿಸಿದ ಕಾರ್ಯವೀಚಂದ್ರಹಾಸನು ಮಹಾಹಿತನೆಮಗೆ, ಮೇಲೆ ನಮ್ಮ ॥
ಸೀಮೆಗರಸಾದಪನು, ಸಂದೇಹವಿಲ್ಲಿದಕೆ. ।
ಸಾಮಾನ್ಯದವನಲ್ಲ, ನಮಗೆ ಮುಂದಕೆ ಸರ್ವ।
ಥಾಮಿತ್ರನಪ್ಪನೆಂದೀತನನು ಕಳುಹಿದೆವು ನಿನ್ನ ಬಳಿಗಿದನರಿವುದು. ॥ ೫೩ ॥

ಹೊತ್ತುಗಳೆಯದೆ ಬಂದ ಬಳಿಕಿವನ ಕುಲಶೀಲ ।
ವಿತ್ತ ವಿದ್ಯಾವಯೋವಿಕ್ರಮಂಗಳನೀಕ್ಷಿ ।
ಸುತ್ತಿರದೆ, ವಿಷವ ಮೋಹಿಸುವಂತೆ ಕೊಡುವುದೀತನಿಗೆ ನೀನದರೊಳೆಮಗೆ ॥
ಉತ್ತರೋತ್ತರವಪ್ಪುದೆಂದು, ಬರೆದಿಹ ಲಿಪಿಯ ।
ನೆತ್ತಿ ವಾಚಿಸಿಕೊಂಡು, ತರಳಾಕ್ಷಿ ತಾನದಕೆ ।
ಮತ್ತೊಂದಭಿಪ್ರಾಯವನು ತಿಳಿದಳುಲ್ಲಂಘಿಸುವರುಂಟೆ ವಿಧಿಕೃತವನು? ॥ ೫೪ ॥

ಈತನು ತಮಗೆ ಮಹಾಹಿತನೆಂದು ತಮ್ಮ ಧರೆ ।
ಗೀತನರಸಹನೆಂದು, ಕುಲಶೀಲವಿದ್ಯೆಗಳ ।
ನೀತನೊಳರಸಬೇಡವೆಂದು, ಮುಂದಕೆ ಸರ್ವಥಾಮಿತ್ರನಪ್ಪನೆಂದು, ॥
ಈತನಿಗೆ ವಿಷಯೆ ಮೋಹಿಸುವಂತೆ ಕೊಡುವುದೆಂ ।
ದಾ ತಾತನಣ್ಣನಿಗೆ ಬರೆಸಿ ಕಳುಹಿದ ಪತ್ರ ।
ವೇ ತಪ್ಪದಿದು ವರ್ಣಪಲ್ಲಟದ ಮೋಸನೆಂದಬಲೆ ಭಾವಿಸುತಿದ್ದಳು. ॥ ೫೫ ॥

ಕಡು ಚೆಲ್ವನಾದ ವರನನು ಕಂಡು ನಿಶ್ಚೈಸಿ, ॥
ತಡೆಯದಿಂದೀತನಿಗೆ ವಿಷಯೆ ಮೋಹಿಸುವಂತೆ ।
ಕೊಡುವುದೆಂದಲ್ಲಿಂದೆ ತನ್ನ ಪಿತನೀತನನು ಕಳುಹಿದನು ಸುತನ ಬಳಿಗೆ, ॥
ಒಡಗೂಡದಿರದೆನ್ನ ಮನದೆಣಿಕೆ ಪತ್ರಿಕೆಯೊ ।
ಳೆಡಹಿ ಬರೆದಕ್ಕರದ ಬೀಳಿದ್ದೊಡದರಿಂದ ।
ಕೆಡುವುದಗ್ಗದ ಕಜ್ಜವೆಂದಾ ತರುಣಿ ತಾನದನು ತಿದ್ದಲನುಗೈದಳು. ॥ ೫೬ ॥

ತಪ್ಪಿದ್ದ ಲಿಪಿಯಲಿ ವಕಾರವನು ತೊಡೆದಲ್ಲಿ ।
ಗೊಪ್ಪುವ ಯಕಾರವನು ಕೆಲಬಲದ ಮಾಮರದೊ ।
ಳಿಪ್ಪ ನಿರ್ಯಾಸವನು ತೆಗೆದು ಕಿರುಬೆರಳುಗುಗುರ್ಗೊನೆಯಿಂದ ತಿದ್ದಿ ಬರೆದು, ॥
ಅಪ್ಪಂತೆ ಮೊದಲಿದ್ದ ಮುದ್ರೆಯನು ಸಂಘಟಿಸಿ ।
ಕುಪ್ಪಸದ ಸೆರಗಿನಲಿ ಕಟ್ಟಿ ಹಳೆಯವೊಲಿರಿಸಿ, ।
ಸಪ್ಪುಳಾಗದ ತೆರದೊಳೆದ್ದು ಮೆಲ್ಲನೆ ಮಂತ್ರಿಸುತೆ ತೊಲಗಿ ಬರುತಿದ್ದಳು. ॥ ೫೭ ॥

ವಿಜಯ, ಕೇಳಿತ್ತ ಬನದಲಿ ಚಂದ್ರಹಾಸನಂ ।
ಬುಜಮಿತ್ರನಪರಾಹ್ಣಕೈದಲ್ಕೆ, ನಿದ್ರೆಯನು । [ಬಿಗಿಸಿ ॥
ತ್ಯಜಿಸಿ, ಮೊಗತೊಳೆದು ಮುಕ್ಕುಳಿಸಿ, ಕಪ್ಪುರವೀಳೆಯನು ಕೊಂಡು, ಬಳಿಕ-
ನಿಜವಾಜಿಯನು ಬಂದಡರ್ದನನುಚರರ್ ವೆರಸಿ, ।
ಋಜುವಾದ ಶಕುನಂಗಳನು ಕೇಳುತೊಲಿದು, ಪೌ ।
ರಜನನಿವನಾರೆಂದು ನೋಡಲ್ಕೆ, ನಗರವನು ಹೊಕ್ಕು ನಡೆತರುತಿದ್ದನು. ॥ ೫೮ ॥

ಆ ನಗರದಲಿ ಕುಂತಳೇಶ್ವರನು ನಿರ್ಮಲ।
ಜ್ಞಾನದಿಂ ಗಾಲವನ ಸೂಕ್ತವನು ಕೇಳುತ, ಸ।
ಚ್ಚಾನಂದಯೋಗವನು ಕೈಕೊಂಡು, ದುಷ್ಟಬುದ್ಧಿಗೆ ವಿಚಾರವನೊಪ್ಪಿಸಿ.॥
ಧ್ಯಾನಪರನಾಗಿರುವೆನದರಿಂದ ಹೊಳಲನು ಪ್ರ।
ಧಾನಿ ಪಾಲಿಪನವನು ಪೊರಮಟ್ಟಿರಲ್ಕೆ, ತತ್
ಸೂನು ಮದನನು ಧುರಂಧರತೆವೆತ್ತಾ ಸಮಯಕೋಲಗದೊಳಿರುತಿದ್ದನು.॥೫೯॥

ಲೀಲೆ ಮಿಗೆ, ನಗರದಲಿ ನಡೆತಂದು ಮಂತ್ರಿಸುತ।
ನಾಲಯದ ಮುಂದೆ ವಾಜಿಯನಿಳಿದು, ತದ್ವಾರ।
ಪಾಲಕರ್ಗಿಂದುಹಾಸನು ಹೇಳ್ದೊಡವರಂತರಾಂತರದೊಳೆಚ್ಚರಿಸಲು;।
ಏಳನೆಯ ಬಾಗಿಲ ವಿವೇಕನೆಂಬವನಿದನು।
ಕೇಳಿ, ತಾಂ ಹಿಡಿದ ಶ್ರದ್ಧಾಯಷ್ಟಿಸಹಿತ ಬಂ।
ದೋಲಗದೊಳಿದ್ದ ಮದನನಿಗೆ ಬಿನ್ನೈಸಲ್ ಪರಾಕಾದೊಡಿಂತೆಂದನು.॥೬೦॥

(ಈ ಮಾತನ್ನು ಮದನನು ಕೇಳಿ ಚಂದ್ರಹಾಸನನ್ನು ಇದಿರ್ಗೊಳ್ಳುವುದಕ್ಕೆ ನಿಶ್ಚೈಸಿ)

ಇದ್ದವರನಾ ಸಭೆಯೊಳಿರಿಸಿ, ಶಶಿಹಾಸನನು।
ಗದ್ದುಗೆಗೆ ನೆಲೆಗೊಳಿಸಿ, ಮದನನಾಸ್ಥಾನದಿಂ।
ದೆದ್ದಮಲನೆಂಬ ತನ್ನನುಜನನು ಕೂಡಿಕೊಂಡೇಕಾಂತಭವನಕೈದಿ,॥
ಹೊದ್ದಿಸಿದ ಮುದ್ರೆಯನು ತೆಗೆದು, ಪತ್ರವನೋದಿ।
ತಿದ್ದಿದಕ್ಕರವನರಿಯದೆ, ನಿಜದ ಬರಹವೆಂ। [॥೬೧॥
ದದ್ದನತಿಹರ್ಷಾರ್ಣವದೊಳಾಗ ಶತಯಾಗತನಯ ಕೇಳ್, ಕೌತುಕವನು.-

ಮುನ್ನ ತಂದೆಯು ನಿರೂಪದ ಕಾರ್ಯವದರಮೇ।
ಲೆನ್ನ ಮನವಿವನೊಳಕ್ಕರ್ ವೆರಸುತಿದೆ; ರೂಪ।
ನುನ್ನಿಸುವೊಡನುಜೆಗೀತನಿಗೆ ಪಾಸಟಿ; ವಿಚಾರಿಸೆ ಕೃಷ್ಣಭಕ್ತನಿವನು;॥

ಇನ್ನು ಸಂಶಯವಿಲ್ಲವೀ ಚಂದ್ರಹಾಸನಿಗೆ ।
ಕನ್ನೈದಿಲಂದದಕ್ಷಿಯು ತಂಗಿಯನು ಕೊಟ್ಟು ।
ಮನ್ನಿಸುವೆನೆಂದು ನಿಶ್ಚೈಸಿ, ಮದನನು ಮತ್ತೆ ಬಂದನೋಲಗದ ಸಭೆಗೆ.॥೬೨॥

ಬಳಿಕ ಮದನನ ಹೇಳಿಕೆಯಲಂದು ವಿದಿತ ಮಂ ।
ಗಳವಿವಾಹೋಚಿತ ಕ್ರಿಯೆಗಳನು ವಿರಚಿಸಿದ ।
ರಿಳೆಯ ದಿವಿಜರ್. ಪುರಂಧ್ರಿಯರ್ಯೆದೆ ಮಜ್ಜನದ ಮಂಡನದ ಮಾಳ್ಕೆಗಳನು ॥
ಅಳವಡಿಸಿದರ್. ಹಣೆಯೊಳೆಸೆವ ಬಾಸಿಗದ ಮದ ।
ವಳಿಗನಾಗಿದ್ದನು ಕುಳಿಂದಜನು ದೇವಪುರ । [ ॥೬೩ ॥
ನಿಳಯಲಕ್ಷ್ಮೀಕಾಂತನೊಲವಿಂದ ವಿಷವಮೃತವಹುದು ಹೊಸತೇನೆನಲ್ಕೆ.

ತೊಳಗಿ ಬೆಳಗುವ ಸದ್ಗುಣಾವಳಿಗಳೈಶ್ವರ್ಯ ।
ಲಲನೆಯನು ಗೃಹಪತಿಯ ಮಂದಿರಕೆ ಸಂಘಟಿಸಿ ।
ಬೆಳವಿಗೆಯನತಿಶಯವ ಮಾಳ್ಪಂತೆ ಸಿಂಗರವ ಗೈದು ನೀಲಾಳಕೆಯರು, ॥
ಬಳಿಕ ಹೊನ್ನಂದಣದ ಮೇಲೆ ವೈವಾಹಮಂ ।
ಗಳ ಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ ।
ನಳಿನಪತ್ರಾಕ್ಷಿಯನು ತಂದರೊಸಗೆಯಲಂದು ವಿಭವದ ವಿಲಾಸದಿಂದ. ॥೬೪॥

ಬಳಸಿದ ಸಮಸ್ತಜನಜಂಗುಳಿಯ, ಕೈಸೊಡ ।
ರ್ಗಳ ಸಾಲಸಂದಣಿಯ, ಹಾಡುವ ಪುರಂಧ್ರಿಯರ, ।
ಕಳಸ ಕನ್ನಡಿ ಹಿಡಿದ ಕನ್ನೆಯರ, ನಾನಾ ಸುವಸ್ತುಗಳ ವಿಸ್ತರಣದ, ॥
ಮೊಳಗುವೊಸಗೆಯ ವಾದ್ಯಸಂಕುಲದ, ಬಹುಫಲಾ ।
ವಳಿಗಳ ವಿಡಾಯದಿಂದೈತಂದು, ದಂಡಿಗೆಯ ।
ನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸನು ಭದ್ರಮಂಟಪದಲಿ. ॥ ೬೫ ॥

ಮುಂದೆ ವಿರಚಿಸಿದ ವೇದಿಯಲೆಸೆವ ಹಸೆಗೆ ನಡೆ ।
ತಂದು ಪಾಣಿಗ್ರಹಣವನು ಗೈದು, ಲಾಜಾಜ್ಯ ।
ದಿಂದ ಹೋಮದಲಗ್ನಿಯನು ಬೆಳಗೆ, ವಿಪ್ರರಾಶೀರ್ವಾದವನು ಮಾಡಲು, ॥

ಬಂದು ತಿಲಕವನಿಟ್ಟು, ಪತ್ರಫಲವನು ಕೊಟ್ಟು, ।
ಹೊಂದಳಿಗೆ ಹಿಡಿದಾರತಿಯನೆತ್ತಲೈದೆಯರ್, ।
ಕಂದರ್ಪರತಿಗಳ ವಿವಾಹವೆನೆ ಕಂಗೊಳಿಸಿತಾ ದಂಪತಿಗಳ ಮದುವೆ. ॥ ೬೬ ॥

ಸುತ್ರಾಮತನಯ, ಕೇಳುತ್ಸವದಲೀ ಪರಿ ದಿ ।
ತ್ರಯವು ನಡೆಯಲ್ಕೆ, ನಾಲ್ಕನೆಯ ದಿವಸದಲಿ ।
ಚಿತ್ರದಿಂ ವಿರಚಿಸಿ, ಪೊಳಲ್ಸಿಂಗರಿಸಿ, ನಾಗವಲ್ಲಿಯ ಸೊಡರ್ಗಳನೊದವಿಸಿ, ॥
ಕ್ಷತ್ರಿಯ ವಿವಾಹ ವೈಭವದಲಿದು ಹೊಸತೆನೆ, ಧ ।
ರಿತ್ರಿಯಲಿ ಚಂದ್ರಹಾಸಂಗಾಯ್ತು ಮದುವೆ. ಶತ ।
ಪತ್ರನಾಭನ ಕಿಂಕರರಿಗೆ ಮಾಡಿದ ಮಿಥ್ಯೆಯದು ತಾನೆ ಸತ್ಯವೆನಲು. ॥ ೬೭ ॥

ಬಂಡಾರದಖಿಳವಸ್ತುವನೊಂದು ತೃಣವಾಗಿ ।
ಕಂಡು ವೆಚ್ಚಿಸಿ, ಚಂದ್ರಹಾಸನ ವಿವಾಹವನು ।
ಕೊಂಡೆಸಗುತಿದ್ದನೊಲವಿಂ ಮದನನಿತ್ತ ಕುಂತಳ ಪುರದಲವನತ್ತಲು ॥
ಅಂಡಲೆದು ಚಂದನಾವತಿಯಲಿ ಕುಳಿಂದನನು ।
ದಂಡಿಸಿದನಾ ದುಷ್ಟಬುದ್ಧಿ, ಜರೆದುರೆ ಬೈದು ।
ಹಿಂಡಿ ಹಿಳಿದರ್ಥವನು ತೆಗೆದು ಸೆರೆಮನೆಗಿಕ್ಕಿ ನಿಗಳವನು ಕಾಲ್ಗೆ ಹೂಡಿ.॥೬೮॥

ಹೆಕ್ಕಳಿಸಿ ರಾಜ್ಯವನು ಕೊಟ್ಟರೆನ್ನನು ಮರೆದು, ।
ಸೊಕ್ಕಿ ತನಗೊಬ್ಬ ಮಗನನು ಮಾಡಿಕೊಂಡವನ ।
ಮಕ್ಕಳಾಟಿಕೆಯಿಂದ ದೇವತಾಲಯ ತಟಾಕಾರಾಮಕೊಡವೆಗಳನು ॥
ಇಕ್ಕಿ ಕೆಡಿಸಿದನೆಂದವನ ವಳಿತವನು ತೆಗೆದು, ।
ಕಕ್ಕಸದ ಬಂಧನದಲಿರಿಸಿ, ಕುಂತಳನಗರಿ ।
ಗಕ್ಕರಿಂದೈತಂದನಾ ದುಷ್ಟಬುದ್ಧಿ ವಾಹಕರನವಗಡಿಸಿ ನಡೆಸಿ. ॥ ೬೯ ॥

ಕೊಂದಪನೊ ವಿಷವನೂಡಿಸಿ ಚಂದ್ರಹಾಸನನು, ।
ಮುಂದಮತಿಯಾಗಿ ಮರೆದಿರ್ಪನೋ ಮಗನೆಂಬ ।
ಸಂದೇಹದಿಂ ಚಂದನಾವತಿಯಲಿರದೆ, ಕುಂತಳಪುರಕ್ಕೆ ದುಷ್ಟಬುದ್ಧಿ ॥

ನಿಂದಲ್ಲಿ ನಿಲ್ಲದೈತರೆ ಪಥದಲಿದಿರಾಗಿ ।
ಬಂದು ನುಡಿದುದು ಸರ್ಪವೊಂದು, "ನಿನ್ನಾಲಯದ । [॥ ೭೦ ॥
ಲಿಂದುವರೆಗೊಡವೆಯನು ಕಾದಿದ್ದೆನದು ನಿನ್ನ ಸುತನಿಂದ ಹೋದುದೆಂದು",

ಮಾನವರ ತೆರದಲಿಂತೆಂದೊರೆದು ಫಣಿ ಬಿಲಕೆ ।
ತಾನಿಳಿಯೆ, ಕೇಳಿ ವಿಸ್ಮಿತನಾಗಿ, ಮಂತ್ರಿ ದು ।
ಮ್ಮಾನದಿಂ ನಗರದ ಸಮೀಪಕೈತರೆ, ವಾದ್ಯಘೋಷಿತವು ಕಿವಿಯಲಿಡಿಯೆ, ॥
ಏನಿದುತ್ಸವ ಊರೊಳೆನೆ, ಕಂಡವರ್ "ನಿನ್ನ ।
ಸೂನು ಮದನನು ಚಂದ್ರಹಾಸನಿಗೆ ವಿಷಯೆಗೆ ವಿ [॥ ೭೧ ॥
ಧಾನದಿಂ ಮದುವೆಯನು ಮಾಡಿಸಿದನದರೊಸಗೆ ಹೊಳಲೊಳಾದಪುದೆ"ಂದರು.

ಕೂರ್ದಸಿಯನಿಳುಹಿದಂತಾಯ್ತು ಕರ್ಣದಲಾಗ, ।
ಕಾರ್ದುವಕ್ಷಿಗಳರುಣತೆಯನುಗ್ರಕೋಪದಿಂ, ।
ಮೀರ್ದನೇ ತನ್ನ ನೇಮವನಕಟ ಮಗನೆಂದು ಹಲ್ಗಡಿಯುತೈತರಲ್ಕೆ; ॥
ಸಾರ್ದ ಸಂತೋಷದಿಂ ಬಂದು ಕಾಲ್ಗೆರಗಿದರೆ, ।
ಚೀರ್ದು ಸುತನನು ಬೈದು, ಮಂತ್ರಿ ನಿಜ ಸದನವನು ।
ಸೇರ್ದು ಹೊನ್ನಂದಣವನಿಳಿದಾತ್ಮಜಾತನನು ನೋಡಿ, ಮುಳಿದಿಂತೆಂದನು. ॥೭೨॥

ರಂಜಿಸುವ ಹೊಸ ಮುತ್ತಿನೆಸೆವ ಬಾಸಿಗದ ನೊಸ ।
ಲಿಂ, ಜಡಿದು ಮಣಿಭೂಷಣಾವಳಿಯ ಕಾಂತಿಯಿಂ, ।
ಮಂಜುಳ ಹರಿದ್ರ ಕುಂಕುಮ ಚರ್ಚಿತಾಂಗದಿಂ, ಚೆಲ್ವಿಂದೆ ಸಂಗಡಿಸಿದ ॥
ಅಂಜಳಿಗಳಿಂ, ಮೆರೆವ ದಂಪತಿಗಳಭಿನಮಿಸೆ, ।
ಮಂಜರಂ ಮರಿಗಿಳಿಗಳನು ನಿರೀಕ್ಷಿಸುವಂತೆ, । [॥ ೭೩ ॥
ನಂಜಿಡಿದ ಮನದಮಾತ್ಯನು ನೋಡಿ, ತನ್ನ ಸುತನನು ಬೈಯುತಿಂತೆಂದನು.

"ಮೂಢ, ನೀನೆಲವಲವೊ, ಮದನ! ನಿನ್ನೆಡೆಗೆ ನಾ ।
ಗೂಢದಿಂ ಬರೆಸಿ ಕಳುಹಿದರುರುವ ಕಜ್ಜವನು ।
ರೂಢಿಯನು ಮಾಡಿ ಕೆಡಿಸಿದೆ, ಪಾಪಿ, ಹೃದಯಶೂಲವನೆನಗೆ ಮೇದಿನಿಯಲಿ ॥

ಗಾಢದಿಂ ಬಲಿದೆ, ಸಾಮ್ರಾಜ್ಯ ಸಿಂಹಾಸನಾ ।
ರೂಢನಾಗಿರಲೊಲ್ಲ ದಾರ್ಜಿಸಿದ ವಿತ್ತವನು ।
ಷೋಢೈಸಿದಖಿಳ ಜನಕಿತ್ತೆ, ವನವಾಸವೇ ಗತಿ ನಿನಗೆ, ಹೋಗೆಂದನು.॥ ೭೪ ॥

ಪಿತನ ಮಾತನು ಕೇಳಿ ಮದನನುರೆ ಬೆರಗಾಗಿ, ।
"ಖತಿಯೇಕೆ? ಜೀಯ ನಿಮ್ಮಡಿಗಳ ನಿರೂಪವನು ।
ಪ್ರತಿಪಾಲಿಸಿದೆನಲ್ಲದಾನತಿಕ್ರಮಿಸಿ ಮಾಡಿದ ಕಜ್ಜವೇನಿದರಲಿ? ॥
ಕ್ಷಿತಿಗೆ ಕೌತುಕವೆ? ತಂದೆಯ ಮಾತಿಗಾಗಿ ರಘು ।
ಪತಿ ವರ್ತಿಸನೆ ವಿಪಿನವಾಸದಲಿ? ಪತ್ರಸಂ । [ ॥ ೭೫ ॥
ಮತಿ ಹಿಡಿದು ವಿಷಯೆಗೆ ವಿವಾಹವನು ವಿರಚಿಸಿದರಾಯ್ತೆನಗೆ ವನವೆಂದನು.

ಗನ್ನಗತಕದ ಮಾತು ಸಾಕೆನ್ನ ಕಣ್ಣ ಮುಂ ।
ದಿನ್ನಿರದೆ ಹೋಗೆಂದು ಮಂತ್ರಿ ಮಗನನು ಬೈದು, ।
ಮುನ್ನ ತಾ ಬರೆಸಿ ಕಳುಹಿದ ಪತ್ರವನು ತರಿಸಿ, ನೋಡಿಕೊಂಡದರಲಿದ್ದ ॥
ಭಿನ್ನಿಸಿದ ಭಾವಾರ್ಥವನು ತಿಳಿದು, ತಪ್ಪಿಲ್ಲ ।
ತನ್ನ ತನಯನಲಿನ್ನು ಲೋಕದಲಿ ವಿಧಿ ಲಿಖಿತ ।
ವನ್ನಿವಾರಿಪರುಂಟೆ? ಶಿವಶಿವಾ, ಹೊಸತೆಂದು ಬಿಸುಸುಯ್ದು ಬೆರಗಾದನು.॥೭೬॥

ವಿಷವ ಮೋಹಿಸುವಂತೆ ಕೊಡುವುದೆನಲೀತನಿಗೆ ।
ವಿಷಯೆ ಮೋಹಿಸುವಂತೆ ಕೊಡುವುದೆಂಬೀ ಲೇಖ । [ಹಾಸನ ॥
ವಿಷಯುವಿದು ವಿಧಿಕೃತವೊ? ತನ್ನ ಮೋಸವೊ? ಬರೆದವನ ಮರೆಹೊ? ಶಶಿ-
ವೃಷೆಯೊ? ಮದನನ ಮೇಲೆ ತಪ್ಪಿಲ್ಲ, ಮೊದಲೆನಗೆ ।
ಋಷಿಗಳಾಡಿದ ಮಾತು ಹುಸಿಯದೆಂದಾ ಮಂತ್ರಿ । [ ತಿದ್ದನು. ॥ ೭೭ ॥
ವಿಷಮ ಬುದ್ಧಿಯಲೊಂದುಪಾಯವನು ಮನದೊಳಗೆ ನೆನೆದು ಚಿಂತಿಸು-

ವಿಧುಹಾಸನನು ಹಲವುಪಾಯದಿಂದೀಗ ನಾ ।
ವಧಿಸದಿದ್ದರೆ ನನ್ನ ಸಂತತಿಗೆ ಧರೆಯುಸಾ ।
ಧಿಕ ಸಂಪದವಾಗದದರಿಂದ ಕುಲಘಾತಕಿಗೆ ಮದುವೆಯಾದ ವಿಷಯೆ ॥

ವಿಧವೆಯಾಗಿರಲೆಂದು ಹೃದಯದಲಿ ನಿಶ್ಚೈಸಿ, ।
ಮಧುರೋಕ್ತಿಯಿಂದ ಮದುಮಕ್ಕಳನು ಮನ್ನಿಸಿ, ವಿ ।
ವಿಧವೈಭವಂಗಳನು ನುಡಿಸಿ, ಜಾಮಾತನನು ಮಂತ್ರಿ ಕರೆದಿಂತೆಂದನು. ॥ ೭೮ ॥

"ವೀರ ಬಾರೈ, ಚಂದ್ರಹಾಸ ನೀನಿನ್ನೆಗಂ ।
ದೂರವಾಗಿದ್ದೆ, ನಮಗಿನ್ನಳಿಯನಾದ ಬಳಿ ।
ಕೂರ ಹೊರ ಬನದಲಿಹ ಚಂಡಿಕಾಲಯಕೆ ಮದುವೆಯ ನಾಲ್ಕನೆಯ ದಿನದಲಿ ॥

ನೀರಜಸಖಾಸ್ತ ಸಮಯದಲೊಬ್ಬನೇ ಹೋಗಿ, ।
ಗೌರಿಯನು ಪೂಜಿಸಿ ಬಹುದು, ನಮ್ಮ ವಂಶದಾ ।
ಚಾರವಿದು ವರನಾದವನಿಗೆ; ನೀನಿಂದದನು ಮಾಡೆಂ"ದು ನೇಮಿಸಿದನು. ॥ ೭೯ ॥

ಲೇಸಾದುದೆಂದು ಮಾವನ ಮಾತಿಗೊಪ್ಪಿ ಶಶಿ ।
ಹಾಸನು ಪ್ರಸೂನ ಗಂಧಾಕ್ಷತೆಗಳನು ತರಿಸ ।
ಲಾ ಸಚಿವನತಿಗೂಢದಿಂದ ಚಂಡಾಲರನು ಕರೆಸಿ, "ನೀವಂದಿನಂತೆ ॥

ಮೋಸದಿಂ ಬಿಟ್ಟು ಬಾರದೆ, ಚಂಡಿಕಾಲಯಕೆ ।
ನೇಸರಂಬುಧಿಗಿಳಿಯಲರ್ಚನೆಗೆ ಬಹನೊಬ್ಬ ।
ನೋಸರಿಸದಡಗಿಕೊಂಡಿದ್ದಾತನನು ಕೊಲ್ವುದೆಂ"ದು ಬೆಸಸಿದನವರಿಗೆ. ॥ ೮೦ ॥

ವಿಜಯ ಕೇಳಾ ಸಮಯದಲಿ ಕುಂತಳೇಶ್ವರನು ।
ನಿಜಶರೀರಚ್ಛಾಯೆ ತಲೆಯಿಲ್ಲದಿರೆ ಕಂಡು, ।
ದ್ವಿಜಶಿರೋಮಣಿ ಗಾಲವನಿಗರಿಪಲಾತನಿದು ಮೃತಿಗೆ ಕಾರಣವೆನಲ್ಕೆ; ॥

ರುಜೆಗೆ ಮೈಗೊಡಬಾರದೆಂದು ನಿರ್ಮೋಕವನು ।
ಭುಜಗಪತಿ ಬಿಡುವಂತೆ ಸಕಲ ಸೌಭಾಗ್ಯವನು । [ ॥ ೮೧ ॥
ತ್ಯಜಿಸಿ, ನಿರುಪಮ ಯೋಗಸಿದ್ಧಿಯನು ಪಡೆಯೆ ವನವಾಸಕುದ್ಯೋಗಿಸಿದನು.-

ಗಾಲವನ ಪದಕೆರಗಿ, ಕೈಮುಗಿದು ನಿಂದು, ಭೂ ।
ಪಾಲಕನು "ನನಗಿನ್ನು ಸಾಕು ರಾಜ್ಯದ ಚಿಂತೆ ।
ಕಾಲವನು ಸಾಧಿಸುವೆನತುಲಯೋಗದಲೆನಗೆ ಸುತರಿಲ್ಲ; ಧರೆಯನಾರ್ಗೆ ॥

ಬಾಲೆ ಚಂಪಕಮಾಲಿನಿಯುನಾರ್ಗೆ ಕುಡುವೆನು? ವಿ।
ಶಾಲಮತಿ, ಬೆಸಸೆಂದು'' ಬೇಡಿಕೊಳೆ, ಲಕ್ಷಣ ಸು।
ಶೀಲನಹ ಚಂದ್ರಹಾಸನಿಗೆ ಮೇದಿನಿ ಸಹಿತ ಮಗಳನಿತ್ತಪುದೆಂದನು. ॥೮೦॥

ಎಂದೊಡರಸನು ಗಾಲವನ ಬುದ್ಧಿಯನು ಕೇಳಿ,।
ತಂದೆ ಮಾಡುವ ರಾಜ್ಯಕಾರ್ಯವನು ನಿರ್ವಹಿಸು।
ತಂದು ಬಾಗಿಲಲಿದ್ದ ಮದನನನು ಕರೆಸಿ, ಕೈಹಿಡಿದು ಮೆಲ್ಲನೆ ಕಿವಿಯಲಿ॥
''ಮುಂದೆ ನಮಗುರುವ ಕೆಲಸದ ಹರಿಗೆಯುಂಟು. ನೀ।
ನಿಂದುಹಾಸನನಿಲ್ಲಿಗೀಗಲೊಡಗೊಂಡು ಬಾ!।
ಸಂದೇಹಿಸದೆ ಹೋಗೆ''ನಲ್ಕೆ ಭೂಪಾಲನನು ಬೀಳ್ಕೊಂಡು ಪೊರಮಟ್ಟನು.॥೮೩॥

ಉತ್ತಮ ಹಯಾರೂಢನಾಗಿ ಮದನನು ಜವದ।
ಲಿತ್ತಣಿಂದೈದೆ, ರವಿ ಪಶ್ಚಿಮಾಂಬುಧಿಗಿಳಿವ।
ಹೊತ್ತು ಹೊಂದಳಿಗೆಯಲಿ ಪುಷ್ಪಫಲತಾಂಬೂಲಗಂಧಾಕ್ಷತೆಗಳನಿರಿಸಿ,॥
ಎತ್ತಿಕೊಂಡತ್ತಣಿಂ ಬಹ ಚಂದ್ರಹಾಸನನಿ।
ದೆತ್ತ ಹೋದಪೆಯೆಂದು ಬೆಸಗೊಳಲ್, ತವ ಪಿತನು।
ತತ್ತ ಸುವ್ರತವೆನಲ್ ಚಂಡಿಕಾಪೂಜೆಯನು ಮಾಡಿ ಬಂದಪೆನೆಂದನು. ॥೮೪॥

ತಟ್ಟನೆ ತುರಂಗಮವನಿಳಿದಿಳೆಗೆ, ''ಮತ್ಪಿತನ।
ಕಟ್ಟಳೆಯ ಚಂಡಿಕಾಪೂಜೆಗಾಂ ಹೋದಪೆನು।
ನೆಟ್ಟನೆ ಮಹೀಶ್ವರನು ಹಿರಿದು ಕಜ್ಜಕೆ ನಿನ್ನನೊಡಗೊಂಡು ಬಾಯೆನಲ್ಕೆ॥
ಕಟ್ಟವಸರಕೆ ಬಂದೆನೆಂ''ದರ್ಚನಾದ್ರವ್ಯ।
ವಿಟ್ಟ ಹೊಂಬಳಿಗೆಯನು ತೆಗೆದುಕೊಂಡಪ್ಪವನು। [॥೮೫॥
ಕೊಟ್ಟಾತನನು ಕಳುಹಿ, ಪೊರಮಟ್ಟನೇಕಾಕಿಯಾಗಿ ಮದನನು ಹೊಳಲನು.-

ಖಳರಂತರಂಗ ಪ್ರವೇಶದ ವಿವೇಕವನು।
ಬಳಸಿದರಿಷಡ್ವರ್ಗವೊತ್ತರಿಸಿ ಮುರಿವಂತೆ,।
ಹೊಲಬರಿಯದೊಳವುಗುವ ಮದನನನು ಮಂತ್ರಿ ಕಳುಹಿದರಲ್ಲಿ ಬಂದಡಗಿದ॥

ಕೊಲೆಗಡಿಗ ಚಂಡಾಲರುಗಿದ ಕೈದುಗಳಿಂದ ।
ಕೆಲಬಲದೊಳಿದ್ದು ಹೊಯ್ದುರಿದು ಕೆಡಹಿದರೆ, ಭೂ ।
ತಳಕೆ ಬೀಳುತ್ತವನು ಮಾಧವಸ್ಮರಣೆಯಿಂದಸು ತೊರೆದನಾ ಕ್ಷಣದಲಿ.॥ ೮೬ ॥

ಅವಗಡಿಸಿ ಮದನನನು ಘಾತುಕರ್ ಚಂಡಿಕಾ ।
ಭವನದಲಿ ಕೊಂದು ನಿಲ್ಲದೆ ಹೋದರಿತ್ತಲು ।
ತ್ಸವದಿಂದ ಚಂದ್ರಹಾಸನು ಕುಂತಳೇಂದ್ರನನು ಕಾಣಲಾ, ನೃಪನವನಿಗೆ ॥
ಅವನಿಯನು ಕೊಟ್ಟರಸುಪಟ್ಟವನು ಕಟ್ಟಿ, ಗಾ ।
ಲವನ ಮತದಿಂದ ಗಾಂಧರ್ವವೈವಾಹದಿಂ ।
ಕುವರಿ ಚಂಪಕಮಾಲಿನಿಯನಿತ್ತು, ಸತ್ಕರಿಸಿ, ಬನಕೆ ತಾಂ ಪೊರಮಟ್ಟನು.॥೮೭॥

ಬಾಧಿಸುವ ಸುಖದುಃಖದೊಡಲೆನಿಪ ಸಂಸಾರ ।
ಸಾಧನವನೆಲ್ಲವನು ತೊರೆದು, ಸಮ್ಯಗ್ಜ್ಞಾನ ।
ಬೋಧಿತದ ಯೋಗವನು ಕೈಕೊಂಡು, ಸತಿಸಹಿತ ಗಾಲವನನುಜ್ಞೆಯಿಂದ ॥
ಗೋಧೂಳಿ ಲಗ್ನದಲಿ ಪೊರಮಟ್ಟನಾ ಕುಂತ ।
ಳಾಧಿಪನರಣ್ಯವಾಸಕೆ. ಬಳಿಕ ಚಂದ್ರಹಾ ।
ಸಾಧೀನವಾಯ್ತವನ ಸಂಪದವು 'ಪುರುಷಸ್ಯ ಭಾಗ್ಯ' ಎಂಬುದು ನಿಜವೆನೆ.॥೮೮॥

ಪಟ್ಟದರಸಾಗಲ್ಕೆ ಚಂದ್ರಹಾಸನು, ಬಳಿಕ ।
ಪಟ್ಟಣದ ಜನವರಿಯಲೆಂದು ಸಿಂಗರಿಸಿ ತೋ ।
ರ್ಪಟ್ಟ ಗಜಮಸ್ತಕದ ಮೇಲೆ ನೃಪಸುತೆ ಸಹಿತ ಪೊರಮಟ್ಟನುತ್ಸವದಲಿ; ॥
ದಟ್ಟಿಸಿದ ವಾದ್ಯರವ ಒದರಿತೀವಾರ್ತೆ ಕಿವಿ ।
ದಟ್ಟಿದರೆ, ದುಷ್ಟಬುದ್ಧಿಗೆ ಮತ್ತೆ ಭೀತಿ ಹೊ ।
ಯ್ದುಟ್ಟತೇನೆಂಬೆನದು ಹೊಸತಲಾ ದೈವಕೃತವೆಂದು ಸೈವೆರಗಾದನು. ॥ ೮೯ ॥

ಗಾಲವನ ಮತದಲೆನ್ನನು ಕರೆಸದಿಂದು ಭೂ ।
ಪಾಲನು ಕುಳಿಂದತನಯನಿಗಿಳೆಯನೊಪ್ಪಿಸಿ ವ ।
ನಾಲಯಕೆ ತೆರಳಿದನೆ? ಮದನನಿದ್ದೇಗೈದನೆಂದು ಹಲ್ಮೊರೆದು, ಮಗನ ॥

ಮೇಲೆ ಕೋಪಿಸುತಿದ್ದನನ್ನೆಗಂ ಭ್ರಮರಾರಿ ।
ಮಾಲಿನಿವೆರಸಿ ಮಾವನನು ಕಾಣಲೆಂದು, ಶುಂ ।
ಡಾಲನುಸ್ತಕದಿಂದ ಇಳಿತಂದು ಶಶಿಹಾಸನೆರಗಿದನು ಸಚಿವನಡಿಗೆ. ॥ ೯೦ ॥

ಕಳಿವರಿವ ಕೋಪದಿಂ ಮಂತ್ರಿ "ವಂಶಾಚಾರ ।
ಮುಳಿಯಲಾಗದು, ಚಂಡಿಕಾರ್ಚನೆಗೆ ನಡೆಯೆಂದು ।
ಕಳುಹಿದರೆ ನೀಂ ಮಾಡಿದುಜ್ಜುಗವಿದೇನೆಂ"ದು ಕೇಳ್ದೊಡಾ ಶಶಿಹಾಸನು ॥
"ಅಳವಡಿಸಿಕೊಂಡು ನಾಂ ಹೋಗುತಿರೆ, ನಡುವೆ ಕುಂ ।
ತಳರಾಜನರಮನೆಗೆ ತನಗವಸರವನಿತ್ತು, ।
ತಳರ್ದನೊಬ್ಬನೆ ನಿನ್ನ ಮಗನಂಬಿಕಾಪೂಜೆಗಿಂತಾಯ್ತು ಬಳಿಕೆಂ"ದನು. ॥ ೬೧ ॥

ಹಮ್ಮೈಸಿದನು ದುಷ್ಟಬುದ್ಧಿ. ನಯದೊಳಗಳಿಯ ।
ನಮ್ಮನೆಗೆ ಬೀಳ್ಕೊಟ್ಟನರಿದರಿದು ಪರಹಿಂಸೆ ।
ಯುಮ್ಮಡಿ ಮಾನವನು ಬಾಳ್ದಪನೆ, ದೀಪವನು ಕೆಡಿಸುವ ಪತಂಗದಂತೆ? ॥
ನಮ್ಮುಪಾಯವೆ ನಮಗಪಾಯವನು ತಂದುದೆಂ ।
ದೊಮ್ಮೆ ನಿಜಸದನವನು ಹೊಕ್ಕಿರುವರಿಯದವೊ ।
ಲುಮ್ಮಳಿಸಿ ಶೋಕದಿಂ ಪೊರಮಟ್ಟನೇರಿಳಿದು ಕೋಟೆಯನು ಕತ್ತಲೆಯಲಿ.॥೬೨॥

ಪಾಕಶಾಸನ ತನಯ, ಕೇಳ್, ಬಳಿಕ ಮಂತ್ರಿಸುತ ।
ಶೋಕದಿಂದಲ್ಲಿಹ ಮರುಳ್ಗಳನು ಕಾಣದವಿ ।
ವೇಕದಿಂ ಬೇವ ಕುಣಪದ ಚಿತಿಯಲುರಿವ ಕಾಷ್ಠಂಗಳನು ತೆಗೆದುಕೊಂಡು, ॥
ಆ ಕಾಳಿಕಾಲಯಕೆ ಬಂದದರ ಬೆಳಕಿನಲಿ ।
ವ್ಯಾಕೀರ್ಣಕೇಶದ, ನಿಮಿರ್ದ ಕೈಕಾಲುಗಳ । [ ನು. ॥ ೯೩ ॥
ನೇಕಾಯುಧದ ಗಾಯದೊಡಲ, ರುಧಿರದ ಹೊನಲ, ಸುಕುಮಾರನನು ಕಂಡ-

ಉನ್ನಿಸಿದ ನಿಜಮನೋರಥವುಡಿದೊರಗಿದಂತೆ, ।
ತನ್ನ ಕುಲತರು ಮುರಿದು ಬಿದ್ದಂತೆ, ಸೌಭಾಗ್ಯ ।
ದುನ್ನತ ಪ್ರಾಸಾದವೊರ್ಗುಡಿಸಿ ಕೆಡದಂತೆ; ಮುರಿದ ಮೀಸೆಗಳ, ಮೊಗದ ॥

ಬಿನ್ನಣದ, ಬಿಟ್ಟ ಕಂಗಳ, ಬಿಗಿದ ಹುಬ್ಬುಗಳ, ।
ಕೆನ್ನೀರೊಳದ್ದ ಕೇಶದ ಶೋಣಿತಾಂಬರದ, ।
ಭಿನ್ನವಾದವಯುವದ, ನಂದನನು ಕಾತ್ಯಾಯನಿಯ ಮುಂದೆ ಮಡಿದಿದ್ದನು.॥೯೪॥

ಕೈಯಲಿಹ ಕಾಪ್ಯಂಗಳನು ಬಿಸುಟು, ತನುಭವನ ।
ಮೈಯ ಗಾಯಂಗಳನು ತಡಹಿ, ತಕ್ಕೈಸಿ ಮಗು ।
ಳೊಯ್ಯನೊಯ್ಯನೆ ಕುಳ್ಳಿರಿಸಿ, ಮೊಗಕೆ ಮೊಗವಿಟ್ಟು ಚುಂಬಿಸಿ, "ಕುಮಾರ ನಿನ್ನ॥
ಅಯ್ಯ ನಾಂ ಬಂದೆನೇಳೈ ತಂದೆ, ನಾಡನಾ ।
ರಯ್ಯ ಬೇಡವೆ ಕಂದ? ಕುಂತಳಾಧೀಶನೇ ।
ಗೈಯ್ಯ ಹೇಳಿದನೆನಗೆ ವಿವರಿಸದೆ ಸುಮ್ಮನಿದ್ದಪೆ" ಎಂದೊರಲ್ದನವನು. ॥ ೯೫ ॥

"ಬಂದನಿದೆ ಶಶಿಹಾಸನನುಜೆಯನು ಕುಡು! ವಿಪ್ರ ।
ವೃಂದವನು ತಣಿಸು! ಬಹು ವಿಧದಿಂದ ನಾಂ ಬೈದೆ ।
ನೆಂದು ಮುನಿದಿರಬೇಡ! ವೈಷ್ಣವ ದ್ರೋಹದಿಂದೆನಗಿಂತುಟಾಗದಿಹುದೆ? ॥
ಕಂದ, ನೀನಚ್ಯುತಪರಾಯಣನು, ಶಿವಪೂಜ ।
ಕಂ, ದೇವಗುರುಧರಾಮರ ಸೇವಕನು, ಮೋಸ ।
ದಿಂದಳಿವುದುಚಿತವೆ! ಮದನ, ನನ್ನ ಮರಿಯಾನೆ ಹಾ" ಎಂದೊರಲ್ದನಂದು ॥ ೯೬॥

ಕಂಬನಿಗಳರುಣಾಂಬುವನು ತೊಳೆಯೆ, ಮುಂಡಾಡಿ ।
ಹಂಬಲಿಸಿ ಹಲುಬಿದನು ಮರುಗಿ, ತನ್ನಿಂದಳಿದ ।
ನೆಂಬಳಲ್ ಮಿಗೆ, ಮಂತ್ರಿ ಸೈರಿಸದೆ, ಕೆಲಬಲದ ಕಂಬಂಗಳನು ಹಾಯಲು; ॥
ಕುಂಬಳದ ಕಾಯಂತೆ ಚಿಪ್ಪಾಗಿ ನಿಜಮಸ್ತ ।
ಕಂ ಬಿರಿದುಬಿದ್ದನುರ್ವಿಗೆ, ಹೋದುದಸು ಕಾಯ ।
ದಿಂ. ಬಳಿಕ ನಂದಿದ ಸೊಡರ್ಗಳೆನೆ ಮೃತರಾಗಿ ಸುತತಾತರಿರುತಿದ್ದರು. ॥೯೭॥

ಅರಿಯರಾರುಂ ಪುರದಲಿವರಿಲ್ಲಿ ಮಡಿದುದನು. ।
ತುರುಗಿದ ತಮೋಂಧಮೊಯ್ಯನೆ ಜಾರಿತಳಿಕುಲದ ।
ಸೆರೆ ಬಿಟ್ಟುದಂಬುಜದೊಳೊಡನೆ ತಲೆದೋರಿದನು ತರಣಿ ಮೂಡಣದೆಸೆಯಲಿ;॥

ಪೊರಮಟ್ಟು ಚಂಡಿಕಾಲಯಕೆ ಹೊಸಹೂಗಳನು ।
ತಿರಿತಂದು ಪೂಜಿಸುವೊಡೊಳವುಗುವ ತಾಪಸನು ।
ಬೆರೆತು ಬಿದ್ದಿಹ ತಂದೆಮಕ್ಕಳನು ಕಂಡು, ಹಮ್ಮೈಸಿ ವಿಸ್ಮಿತನಾದನು. ॥ ೯೮ ॥

ಪಟ್ಟಣದಲಿರುಳೊಸಗೆ ಪಸರಿಸಿತು. ರಾಜ್ಯವನು ।
ಬಿಟ್ಟು ವನಕೈದಿದನು ಕುಂತಳಾಧೀಶ್ವರನು. ।
ಪಟ್ಟವಾದುದು ಚಂದ್ರಹಾಸನಿಗೆ. ಸೂನುಸಹಿತೀ ದುಷ್ಟಬುದ್ಧಿಗಿಲ್ಲಿ ॥
ಕೆಟ್ಟೆಣಿಸಿದವರಾರೊ? ಶಿವಶಿವಾದ್ಭುತವೆನುತ ।
ನೆಟ್ಟನೆ ನೃಪಾಲಯಕೆ ತಾಪಸನು ಬಂದು ಮೊರೆ [ ॥ ೯೯ ॥
ಯಿಟ್ಟರೆ, ಕುಳಿಂದಜನು ಕೇಳ್ದಿರದೆ ಪೊರಮಟ್ಟು ಕಾಲ್ನಡೆಯಲೈತಂದನು.

ಚಂಡಿಕಾಲಯಕಖಿಳಜನಸಹಿತ ನಡೆತಂದು, ।
ದಿಂಡುಗೆಡೆದಿಹ ಮಾವಮೈದುನರ ಹಾನಿಯನು । [ನೋಡುತ;] ॥
ಕಂಡು, ಕಡುಶೋಕದಿಂದುರೆ ನೊಂದು, ಚಂದ್ರಹಾಸನು ದೇವಿಯನು
ಖಂಡಿಸಿದೆಲಾ ತನ್ನ ಭಾಗ್ಯವನು! ತಪ್ಪಾವು ।
ದಂಡಲೆದು ಪಡೆವೆನಿವರಸುಗಳನು, ಮೀರಿದರೆ ।
ಪುಂಡರೀಕಾಂಬಕನ ಸಾಯುಜ್ಯವೆನಗಾಗಲೆಂದು ನಿಶ್ಚಿತನಾದನು. ॥ ೧೦೦ ॥

(ಹೀಗೆ ನಿಶ್ಚಯಿಸಿ ಚಂದ್ರಹಾಸನು ತನ್ನ ತಲೆಯನ್ನು ದೇವಿಗೆ ಅರ್ಪಿಸುವೆನೆಂದು ಕತ್ತಿಯನ್ನು ತನ್ನ ಕೊರಳಿಗೆ ಹೂಡಲು, ದೇವಿಯು ಪ್ರತ್ಯಕ್ಷಳಾಗಿ ಆತನ ಆಶಾನುಸಾರವಾಗಿ ಮಂತ್ರಿಯನ್ನೂ ಮದನನನ್ನೂ ಬದುಕಿಸಿದಳು.

ಮೊಳಗಿದುವು ದೇವದುಂದುಭಿಗಳಂತಾಗ ಹೂ ।
ಮಳೆ ಕರೆದುದಭ್ರದಲಿ ಕೊಂಡಾಡಿತಮರತತಿ. ।
ಬಳಿಕ ಶಾಂಭವಿ ಮಾಯವಾದಳಸು ಪಸರಿಸಿತು ಮದನಮಂತ್ರಿಗಳೊಡಲಲಿ. ॥
ಬಲರೂಪಕಾಂತಿಗಳ್ ಮುನ್ನಿನಂದದೊಳೆಸೆಯೆ, ।
ಮಲಗಿದವರೇಳ್ವಂತೆ ಕಣ್ದೆರೆದು ಕುಳ್ಳಿರ್ದ್ದ ।
ರೊಲವಿನಿಂ. ಚಂದ್ರಹಾಸನು ಮಾವನಡಿಗೆ ಮಣಿದಪ್ಪಿದನು ಮೈದುನನನು. ॥



ಕನ್ನಡ ಭಾರತದೊಳಗಿನ

# ಕಿರಾತಾರ್ಜುನರ ಯುದ್ಧ.

## ಅರಣ್ಯ ಪರ್ವ.

ಅರಸ, ಕೇಳೈ, ಮುನಿಪನತ್ತಲು ।
ಸರಿದನಿತ್ತಲು ಪಾರ್ಥನನು ನೃಪ ।
ಕರೆದು, ವೇದವ್ಯಾಸನಿತ್ತುಪದೇಶ ವಿಸ್ತರವ ॥
ಅರುಹಿದನು. "ಕೈಲಾಸಸೀಮಾ ।
ವರುಪದಲ್ಲಿಹುದಿಂದ್ರಕೀಲದ ॥
ಗಿರಿ, ಮಹೇಶಕ್ಷೇತ್ರವಲ್ಲಿಗೆ ಹೋಗು ನೀನೆಂ"ದ. ॥ ೧ ॥

"ಮುಗ್ಗದಿರು ಮಾಯೆಯಲಿ. ಮದದಲಿ ।
ನೆಗ್ಗದಿರು. ರೋಷದ ವಿಡಂಬದ ।
ಲಗ್ಗಳೆಯತನದಿಂದಹಂಕೃತಿ ಭರದಿ ಮರೆಯದಿರು. ॥
ಅಗ್ಗಿಸದಿರಾತ್ಮನನು. ಲೋಭದೊ ।
ಳೊಗ್ಗದಿರು. ಲಘುವಾಗದಿರು. ಮಿಗೆ ।
ಹಿಗ್ಗದಿರು ಹೊಗಳಿಕೆಗೆ ಮನದಲಿ. ಪಾರ್ಥ, ಕೇಳೆಂ"ದ. ॥ ೨ ॥

"ನೆನೆಯದಿರು ತನು ಸುಖವ. ಮನದಲಿ ।
ನೆನೆ ವಿರೋಧಿಯ ಸಿರಿಯ, ನನ್ನಯ ।
ಘನತರದ ಪರಿಭವವ. ನೆನೆ ನಿಮ್ಮಗ್ರಜರ ನುಡಿಯ. ॥
ಮುನಿವರನ ಮಂತ್ರೋಪದೇಶವ ।
ನೆನವುದಭವನ ಚರಣಕಮಲವ ।
ನೆ"ನುತ ದ್ರೌಪದಿ ಎರಗಿದಳು ಪಾರ್ಥನ ಪದಾಬ್ಜದಲಿ. ॥ ೩ ॥

ಬಿಗಿದ ಬತ್ತಳಿಕೆಯನು. ಹೊನ್ನಾ ।
ಯುಗದ, ಖಡುಗ, ಕಠಾರಿ, ಚಾಪವ ।
ತೆಗೆದನಳವಡೆಗಟ್ಟ ಬದ್ದುಗೆದಾರ ಗೊಂಡೆಯುವ, ॥
ದುಗುಡ ಹರುಷದ ಮುಗಿಲತಲೆಯೊ ।
ತ್ತುಗಳಿಗಿಟ್ಟೆಡೆಯಾಗಿ ಗುಣಮಾ ।
ಳಿಗಳ ಮಣಿ, ಕಲಿಪಾರ್ಥ ಬೀಳ್ಕೊಂಡನು ನಿಜಾಗ್ರಜನ. ॥ ೪ ॥

ಅರಸ, ಕೇಳೈ, ಬರುತ ಭಾರತ ।
ವರುಷವನು ದಾಟಿದನು. ತಂಪಿನ ।
ಗಿರಿಯ ತಪ್ಪಲನಿಳಿದನಾ. ಹರಿವರುಷ ಸೀಮೆಯಲಿ ॥
ಬೆರಸಿದನು. ಬಳಿಕುತ್ತರೋತ್ತರ ।
ಸರಣಿಯಲಿ ಸೈನಡೆದು, ಹೊಕ್ಕನು ।
ಸುರರಸೇವ್ಯವನಿಂದ್ರಕೀಲ ಮಹಾವನಾಂತರವ. ॥ ೫ ॥

ಗಿಳಿಯ ಮೃದು ಮಾತುಗಳ, ಮರಿಗೋ ।
ಗಿಲೆಯ ಮಧುರ ಧ್ವನಿಯ, ಹಂಸೆಯ ।
ಕಳರವದ, ಮರಿನವಿಲ ಕೇಕಾರವದ ನಯಸರದ, ॥
ಮೆಲು ದನಿಯ ಪಾರಿವದ, ತುಂಬಿಯ ।
ಲಲಿತ ಗೀತದ, ವನದ ಸಿರಿ ಬಗೆ ।
ಗೊಳಿಸಿತೈ ಪೂರ್ವಾಭಿಭಾಷಣದಲಿ ಧನಂಜಯನ. ॥ ೬ ॥

ಸೊಂಪೆಸೆವ ಕೋಗಿಲೆ ಸರದ, ದೆಸೆ ।
ತಂಫೆಸೆವ ತಂಬೆಲರ, ಹೂವಿನ ।
ಜೊಂಪವನು ಝೋಂಪಿಸುವ ಮರಿದುಂಬಿಗಳ ಮೇಳವದ, ॥
ಪೆಂಪೊಗುವ ತಾವರೆಗೊಳಂಗಳ, ।
ತಂಪಿನೊದಗಿನ, ವನದ ಸೊಗಸಿನ ।
ಸೊಂಪು ಸೆಳೆದುದು ಮನವನೀತನನರಸ, ಕೇಳೆಂದ. ॥ ೭ ॥

ಧರಣಿಪನ ಬೀಳ್ಕೊಂಡು ಮಾರ್ಗಾಂ ।
ತರದೊಳಾರಡೆಗೈದು, ಹೊಕ್ಕನು ।
ಹರನುಕರುಣಾಸಿದ್ಧಿ ಸಾಧನ ಎನಿಪ ಗಿರಿವನವ. ॥
ಮರುದಿವಸದುದಯದಲಿ ಮಿಂದನು ।
ಸರಸಿಯಲಿ. ಸಂಧ್ಯಾಭಿಮುಖದಲಿ ।
ತರಣಿಗರ್ಘ್ಯವನಿತ್ತು ದೇವವ್ರಜಕೆ ಕೈಮುಗಿದ. ॥ ೮ ॥

ಮುಗುಳು ಕಣ್ಗಳ, ಮೇಲುಗುಡಿ ತೋ ।
ಳುಗಳ, ಮಿಡುಕುವ ತುಟಿಯು, ತುದಿ ಕಾ ।
ಲುಗಳ, ಹೊರಿಗೆಯ ತಪದ, ನಿರಿಗೆಯ ನಿಷ್ಪ್ರ ಕಂಪನದ, ॥
ಬಿಗಿದ ಬಿಲ್ಲಿನ, ಬೆನ್ನ ಬತ್ತಳಿ ।
ಕೆಗಳ, ಕಿಗ್ಗಟ್ಟಿನ ಕಠಾರಿಯ, ।
ಹೆಗಲಡಾಯುಧದಾ ತಪಸಿ ತೊಡಗಿದನು ಬಲು ತಪವ. ॥ ೯ ॥

ಮೂರು ದಿನಕೊಮ್ಮೊಮ್ಮೆ ಫಲದಾ ।
ಹಾರದಲಿ ನೂಕಿದನು ತಿಂಗಳ. ।
ಆರು ದಿವಸಕೆ ಫಲವಗೊಂಡನು ತಿಂಗಳೆರಡರಲಿ. ॥
ಮೂರು ತಿಂಗಳ ಕಳೆದನಿಂತೀ ।
ರಾರು ದಿವಸಕೆ ಕಂದಮೂಲಾ ।
ಹಾರದಲಿ ತರಗೆಲೆಯಲಿದ್ದನು ನಾಲ್ಕು ಮಾಸದಲಿ. ॥ ೧೦ ॥

ಏನನೆಂಬೆನು ಪಾರ್ಥನುಗ್ರತ ।
ಪೋನಿಧಾನಜ್ವಾಲೆ ಅನುಸಂ ।
ಧಾನವನು? ತತ್ಪರಿಸರದ ಪಾವನ ತಪೋಧನರ ॥
ಮೌನ ಉರೆ ಸೀದುದು. ಜಪಾನು ।
ಷ್ಠಾನ ಬಿಡೆ ಬೆವರಿತು. ಸಮಾಧಿ ।
ಧ್ಯಾನ ಸೀಕರಿಯಾಯ್ತು, ಸಾರವಿಚಾರ ಶಮೆಸಹಿತ. ॥ ೧೧ ॥

ಕೆದರಿದುವು ಜಡೆ, ಅಕ್ಷಮಾಲೆಗ ।
ಳುದುರಿದುವು, ಕರದಲಿ ಕಮಂಡಲ ।
ಬಿದುರಿದುವು, ಹಳುವಾಯ್ತು ಹರಿಣಾಜಿನ ಮುನೀಶ್ವರರ. ॥
ಕದಡಿತಂಗವಿಭೂತಿ. ಕಡು ಕೋ ।
ಪದಲಿ ಹರಿದರು; ಹರಗಿರಿಯ ಹ ।
ತ್ತಿದರು, ಕಂಡರು ರಾಜಮೌಳಿಯ ರಾಜಮಂದಿರವ. ॥ ೧೦ ॥

ಶಿವನ ಭವನವ ದೂರದಲಿ ಕಂ ।
ಡಿವರು ವೈಯಿಕ್ಕಿದರು. ವರಮುನಿ ।
ನಿವಹ ಬಂದುದು; ಬಾಗಿ ಅವದಿರು ಬಿನ್ನಹದ ಹದನ ॥
ವಿವರಿಸಲು, ಕರೆಸಿದನು. ಕರುಣಾ ।
ರ್ಣವನ ಕಂಡರು, ಮೈಯ ಚಾಚಿದ ।
ರವನಿಯಲಿ "ಜಯಜಯ, ಮಹೇಶ, ನಮಃ ಶಿವಾ"ಎನುತ. ॥ ೧೩ ॥

"ಏಳಿ! ನೀವಾಶ್ರಮಕೆ ಹೋಗಿ! ಚ ।
ಡಾಳಿಸದು ಮುನಿವರರ ತಪ. ಇ
ನ್ನೇಳಿ, ಧಿಟ, ಭಯವಿಲ್ಲ" ಎಂದು ಕರಾಂಬುಜವ ನೆಗಹಿ, ॥
ಬೀಳುಗೊಟ್ಟನು ಸಕಲ ಮುನಿಜನ ।
ಜಾಲವನು. "ಕರೆ ಭೂತನಿಕರವ ।
ಮೇಳವಿಸ ಹೇಳೆ"ಂದು ನಂದೀಶ್ವರಗೆ ನೇಮಿಸಿದ. ॥ ೧೪ ॥

ಅರಸ, ಕೇಳೈ, ಬೇಟೆಯೆಂದೀ ।
ಶ್ವರನ ಕಟಕದೊಳೊದರಿದುದು ಡಂ ।
ಗುರದ ಧನಿ. ಡಾವರದೊಳೈದಿತು ನಿಖಿಳ ಭುವನವನು. ॥
ಪರಮ ಕರುಣಾಸಿಂಧು ಭಕ್ತನ ।
ಹೊರೆವ ಭರದಲಿ, ಭೂರಿ ಮೃಗಯಾ ।
ಚರಣೆಗೋಸುಗ ಶಬರವರರೂಪದಲಿ ರಂಜಿಸಿದ. ॥ ೧೫ ॥

ತೆಗೆದು ತಲೆಮಾಲೆಯನು, ಹಸುರಂ ।
ಗಿಗಳ ತೊಟ್ಟನು; ಸುತ್ತುಬರೆ ಹೀ ।
ಲಿಗಳ ಹರಹಿನ, ಪಾರಿವದ ಚಲ್ಲಣವನಳವಡಿಸಿ. ॥
ಬಿಗಿಜೆಡೆಯ ಶಶಿಮುಖಕೆ ಪತ್ರಾ ।
ಳಿಗಳ ಕಟ್ಟಿ, ಕಿರಾತ ವೇಷದ ।
ವಿಗಡ ದೇವರದೇವ ಕೊಂಡನು ಚಾಪಮಾರ್ಗಣವಾ. ॥ ೧೬ ॥

ಇಂಬಿನಲ್ಲಿಹ ಮೂಕ ದಾನವ ।
ನೆಂಬನೊಬ್ಬನು ತನ್ಮಹಾದ್ರಿ ನಿ ।
ತಂಬ ವನದ ನಿಕುಂಜದಲಿ, ನಿರ್ಭಯವಿಹಾರದಲಿ.
ಚುಂಬಿಸಿತು ಬಲು ರಭಸವೆನೆ ವಿಲ ।
ಯಾಂಬುಧಿಯ ಕಳಕಳವನಮರರ ।
ತಿಂಬೆ ನೀಕ್ಷಣವೆನುತ ಖಳನಾಲಿಸಿದನಾ ಧ್ವನಿಯ. ॥ ೧೭ ॥

ಹಂದಿಯಾದನು ದನುಜನಾ ಗಿರಿ ।
ಕಂದರವ ಹೊರವಂಟು, ಬೇಟೆಯ ।
ಮಂದಿಯೊಳಗಡಹಾಯ್ದು ನೆತ್ತಿದನಡ್ಡಬಿದ್ದವರ. ॥
ಹಂದಿಯೋ? ತಡೆ, ನಾಯಿಗಳ ಬಿಡು ।
ಹಿಂದೆ; ಹಿಡಿ, ಕೆಡೆ, ಕುತ್ತು, ಕೈಕೊ ।
ಳ್ಳೆಂದು ಗಜಬಜಿಸಿತ್ತು ಗಾವಳಿ ಗಹನಮಧ್ಯದಲಿ. ॥ ೧೮ ॥

ಎಳೆವೆರೆಯ ನಡುವಿದ್ದ ರಾಹುವೊ? ।
ಅಳವಡುವ ದಾಡೆಗಳದೋ? ಮಿಗೆ ।
ಬೆಳೆದ ನೀಲಾಚಲಕೆ ಸರಿಯೆಂದೆನಿಪ ಹೇರೊಡಲೋ? ॥
ಮುಳಿದು ಘರ್ಜಿಸಿ ಕಿಡಿಸುರಿವ ಕಂ ।
ಗಳಲಿ, ರೌದ್ರಾಟೋಪದಲಿ ಕೆ ।
ಕ್ಕಳಸಿತಿಕ್ಕೆಲ ನೋಡುತಿದ್ದುದು ದೇವಸಂತತಿಯ. ॥ ೧೯ ॥

ಇಡುವ ಸೆಲ್ಲೆಹ ಬಲ್ಲೆಹದ, ಹೆ ।
ಗ್ಗಡಿಯನುಗುಳುವ ಬಾಯಧಾರೆಯು, ।
ಉಡಿದು ಹರನ ಮಹೋಗ್ರತರ ಜಾಯಿಲನ ಜಂಗುಳಿಯು ॥
ಕಡಿದು ಕೆಡಹಿ ಪುಳಿಂದ ಶಬರಿಯು ।
ರೆಡೆಗೆಡೆಯುಲಡಹಾಯ್ದು ಮಿಗೆ ಘುಡಿ ।
ಘುಡಿಸಿ ಕವಿದೈತರಲು, ಧೃತಿಗೆಟ್ಟುದು ಗಣಸ್ತೋಮ. ॥ ೨೦ ॥

"ಇದುವೆ ಸಮಯವಲಾ!" ಎನುತ ಹೂ ।
ಡಿದನು ಬಾಣವನುಗಿದು, ಪೂರಾ ।
ಯದಲಿ ತೂಗಿ, ಪಿನಾಕಿ ಎಚ್ಚನು ಮೂಕದಾನವನ. ॥
ಒಡೆದು ಹಾಯ್ದುದು; ಬಾಣಗರಿ ತೋ ।
ರಿದುದು ಬದಿಯುಲಿ. ಕೊಡಹಿ ಗೋಳಿಡು ।
ತದು ಧನಂಜಯನತ್ತ ಹೋದುದು, ಹೊತ್ತ ಕಣೆ ಸಹಿತ. ॥ ೨೧ ॥

ಬಂದು ಗಿರಿಕಂದರದೊಳಿಹ ಮುನಿ ।
ವೃಂದದೊಳಗಡಹಾಯ್ದು ಕೆಡೆವುತ, ।
ಹಂದಿ ಮೋರೆಯ ನೆಗಹಿ, ಮುಲೆವುತ ಗಜರಿ ಗರ್ಜಿಸಿತು. ॥
ಮುಂದಿ ಬೆದರುತ ಗೋಳಿಡುತಲಾ ।
"ಇಂದುಧರನೇ ಬಲ್ಲ! ಶಿವಶಿವ!" ।
ಎಂದು ಮೊರೆಯಿಡೆ, ಕೇಳಿ ಕಂದೆರದೆದ್ದನಾ ಪಾರ್ಥ. ॥ ೨೨ ॥

ಕಂಡನರ್ಜುನನೀ ವರಾಹನ ।
ದಂಡಿ ಲೇಸಲ್ಲೆನುತ, ಬಾಣವ ।
ಗಾಂಡಿವದೊಳಳವಡಿಸಿ, ಬೊಬ್ಬಿರಿದೆಚ್ಚನಾ ಖಳನ, ॥
ದಿಂದುಗೆಡೆದುದು ಕಾಲ ಕೊಡಹುತ, ।
ಗಂಡಶೈಲದವೋಲು; ಭೂತವ ।
ದಿಂಡುದರಿಯುವ ಹಂದಿ ಬಿದ್ದುದು ಪಾರ್ಥನಿದಿರಿನಲಿ. ॥ ೨೩ ॥

ಬಂದನೀಶ್ವರ "ನಾವು ಕೆಡವಿದ ।
ಹಂದಿ ನಮ್ಮದು ತೆಗೆಯಿ" ಎನೆ, ನರ ।
ನೆಂದ "ನಮ್ಮಂಬಿನಲಿ ಬಿದ್ದುದು. ಸಾರು! ನೀನೆನಲು;" ॥
ಬಂದುದೇಕಾಮಿಷವಿರೋಧದ ।
ಕುಂದು ಪಾರ್ಥನ ಚಿತ್ತದಲಿ. ಬಾ ।
ಲೇಂದುಧರನೆಂದೆತ್ತ ಬಲ್ಲನು? ಕೆಣಕಿದನು ಶಿವನ. ॥ ೨೪ ॥

"ಎಲೆ, ಕಿರಾತ, ಮದೀಯ ಬಾಣದ ।
ಬಲೆಗೆ ನೀ ಮೃಗವಾಗದಿರು. ನಿ ।
ನ್ನಳವ ಮರೆಯಾ? ಬನದ ನರಿ, ಮೊಲ, ಹುಲ್ಲೆ, ಹರಿಣನಲಿ ॥
ಗೆಲಿದ ಗುರುವನು ನೀನು. ನಿನ್ನ ।
ಗ್ಗಳಿಕೆಗಾವಂಜುವೆವೆ? ನಿನ್ನೀ ।
ದಳಕೆ ಪತಿಯುಂಟಾದರಾತನ ಕೊಂಡು ಬಾ" ಎಂದ. ॥ ೨೫ ॥

ಎನಲು ನಕ್ಕನು ಶಂಭು, ಭಕ್ತನ ।
ಮನದ ಧೃತಿಯನು, ಭುಜಬಲವನಾ ।
ತನ ಪರಾಕ್ರಮ ಲಕ್ಷ್ಮಿಯನು, ಪಾರ್ವತಿಗೆ ತೋರಿಸುತ; ॥
ನೆನೆದು ನುಡಿದ "ನಿದೇನುಕಾರ್ಯವು? ।
ನಿನಗೆ ತಪದಲಿ ಖಡ್ಗವೇಕೀ ।
ಧನುಶರಾವಳಿ ಏಕೆ? ನಿನ್ನಂಘವಣೆ ಏನೆಂ"ದ. ॥ ೨೬ ॥

"ಏಕೆ ನಿನಗೀ ತಪದ ಚಿಂತೆ? ವಿ ।
ವೇಕಶಾಸ್ತ್ರವಿಚಾರವಿದು. ವಿಪಿ ।
ನೌಕಸದ ಸಂಹಾರವಿದ್ಯಾವೃತ್ತಿ ನಿನ್ನದಲೆ! ॥
ಆಕೆವಾಳರ ಕಳಸು. ನೀನೇ ।
ಕಾಕಿ, ನಿನ್ನಲಿ ಹರಿಯದಾಹವ. ।
ಏಕೆ ನಿನಗೀಗೆಂ"ದು ಕಪಟ ಕಿರಾತನನು ಜರೆದ. ॥ ೨೭ ॥

"ನೀವು ಬಲ್ಲಿರಿ ಶಾಸ್ತ್ರದಲಿ ಶ ।
ಸ್ತ್ರಾವಳಿಯುಲಾವಿಂಬು ಪಕ್ಷಿನ್ಯ ।
ಸಾವಳಿಯ ಬೇಟೆಯುಲಿ ಬಲ್ಲೆವು ಜಾತಿಧರ್ಮವಿದು. ॥

ನೀವು ಬಲುಹುಳ್ಳವರು. ನಿಮ್ಮೊಡ ।
ನಾವು ಸೆಣಸುವರಲ್ಲ. ನಿಮ್ಮವೊ ।
ಲಾವ ಋುಷಿಶಸ್ತ್ರಜ್ಞನಾತನ ಬಿರುದ ತಡೆ" ಎಂದ. ॥ ೨೪ ॥

ಮತ್ತೆ ಸುರಿದನು ಸರಳ ಮಳೆಯುನ ।
ದೆತ್ತ ನಭ? ದೆಸೆ ಎತ್ತ? ಧಾರಿಣಿ ।
ಎತ್ತ? ಅರ್ಜುನನೆತ್ತ? ಕಪಟ ಕಿರಾತ ತಾನೆತ್ತ? ॥

ಹೊತ್ತ ಹೊಗರಿನ ಮೊರೆವ ಗರಿಗಳ ।
ತುತ್ತುಗಿಡಿಗಳ ಹೊಳೆವ ಧಾರೆಯು ।
ಮೊತ್ತವಂದೌಕಿದುವು ಮೃತ್ಯುಂಜಯುನ ಸಮ್ಮುಖಕೆ. ॥ ೨೯ ॥

ಮಂಜು ಮುಸುಕಿದರೇನು ಪರ್ವತ ।
ಅಂಜುವುದೆ? ಹಾಲಾಹಲವ ನೊಣ ।
ನೆಂಜಲಿಸುವುದೇ? ವಡಬ ಶಿಖಿ ನನೆವುದೆ ತುಷಾರದಲಿ? ॥

ಕೆಂಜನಾಳದಿ ಕಟ್ಟುವಡವುದೆ ।
ಕುಂಜರನು? ನರಶರದ ಜೋಡಿನ ।
ಜುಂಜುಮಳೆಯುಲಿ ಜಾಹ್ನವೀಧರ ಜಾರುವನೆ ಎಂದ. ॥ ೩೦ ॥

"ಕಂಡಿರೇ ದೇವಿಯುರು ನರನು ।
ದ್ದಂಡತನವನು? ತರಗೆಲೆಯು ಕೈ ।
ಕೊಂಡು, ತಿಂಗಳು ನಾಲ್ಕು ಪವನಗ್ರಾಸದಿಂ ಬಳಿಕ ॥

ದಂಡಿಸಿದನೀ ದೇಹವನು. ನಾ ।
ನಂಡಲೆಯುಲೊದಗಿದನಲೇ ಸಮ ।
ದಂಡಿಯುಲಿ ನಮ್ಮೊಡನೆ?" ಎಂದನು ನಗುತ ಶಶಿಮೌಳಿ. ॥ ೩೧ ॥

"ಕೊಡುವೆನೀತಂಗೆನ್ನ ಶರವನು, ।
ಮಡದಿ, ಮತ್ತೆಯು ನೋಡು, ಪಾರ್ಥನ ।
ಕಡುಹನೆ" ನುತಿದಿರಾಗಿ, ಬಾಹಪ್ಪಳಿಸಿ, ಬೊಬ್ಬಿಡುತ, ॥

ಹಿಡಿದರಿಬ್ಬರು ಕೈಗಳನು; ಹೊ ।
ಕ್ಕೊಡನೆ ಹತ್ತಾಹತ್ತಿಯಲಿ, ಮಿಗೆ ।
ಜಡಿತೆಯಲಿ ಚಾಳೈಸಿದರು ಬಹುವಿಧದ ಬಿನ್ನಣವ. ॥ ೩೦ ॥

ಘಾಯವನು ಮನ್ನಿಸುತ, ಶಿವ ಪೂ ।
ರಾಯದಲಿ ಮೆಟ್ಟಿದನು. ಪಾರ್ಥನ ।
ಬಾಯೊಳೊಕ್ಕುದು ರುಧಿರ ನಾಸಿಕದೆರಡು ಬಾಹೆಯಲಿ. ॥

ನೋಯ ನೊಂದನು ವೀರಿ ಮುನಿಯುಲ ।
ಪಾಯವಾದುದೆ? ಕಟಕಟಾ! ತ ।
ಪ್ಪಾಯಿತೇ! ತಪ್ಪಾಯ್ತೆನುತ ಮರುಗಿದನು ಮದನಾರಿ. ॥ ೩೧ ॥

ಬಿರಿದುದೀತನ ಗರ್ವಗಿರಿ. ಮಡ ।
ಮುರಿದುದೀತನ ಶಕ್ತಿ. ಸಲೆ ಟೆ ।
ಬ್ಬರಿಸಿತಿಂದ್ರಿಯವರ್ಗ. ನೆಗ್ಗಿತು ನೆನಹಿನೊಡ್ಡವಣೆ. ॥

ಹರಿದುದಂತಃಸ್ವೇದಜಲ. ಕಾ ।
ಹುರತೆ ಕಾಲ್ತೊಳೆಯಾಯ್ತು. ಮತಿನಿ ।
ಬ್ಬರದ ಬೆರಗಿನ ಬೇಟದಲಿ ಬೆಂಡಾದನಾ ಪಾರ್ಥ. ॥ ೩೨ ॥

"ಹಂದಿ ಏತಕೆ ನನಗೆ? ಬನದ ಪು ।
ಳಿಂದನಲಿ ಸೆಣಸಾಗಲೇಕೆ? ಪು ।
ಳಿಂದನೇ ಮಾನ್ಯಕನು ನಾವವಮಾನ್ಯರಾದೆವಲೆ! ॥

ಇಂದು ಮೌಳಿಯುಪೇಕ್ಷೆಯೋ? ನಾ ।
ನಿಂದು ಶಿವಪದಭಕ್ತಿಶೂನ್ಯನೊ? ।
ಮಂದಭಾಗ್ಯನು ನಾನಲಾ! ಹಾ!" ಎನುತ ಚಿಂತಿಸಿದ. ॥ ೩೩ ॥

ಮಣಲ ಲಿಂಗವ ಮಾಡಿದನು. ನಿ |
ರ್ಗುಣನ ಸಗುಣಾರಾಧನೆಯು ಮ |
ನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತದಲಿ. ||
ಕಣಗಿಲೆಯು, ಬಂದುಗೆಯು, ಕಕ್ಕೆಯು |
ಸಣಬ, ಸರಿಸದ, ಕುಸುಮದಲಿ ರಿಪು |
ಗಣಭಯಂಕರನರ್ಚಿಸಿದನಂಧಾಸುರಾಂತಕನ. || ೩೬ ||

"ಕಾಣಬಹುದೋ ಶಬರ! ನಿನ್ನೀ |
ಪ್ರಾಣವೆನ್ನಾಧೀನವರಿಯಾ? |
ಸ್ಥಾಣುವಿನ ಬಲುಹುಂಟು, ಹಿಂಡುವೆನಿನ್ನು ನಿನ್ನಸುವ. ||
ಗೋಣ ಮುರಿವೆನು ಮಿಡುಕಿದರೆ, ಶಿವ |
ನಾಣೆ. ಬಾ, ಸಮ್ಮುಖಕೆ ಹಾಣಾ |
ಹಾಣಿಗಿನ್ನನುವಾಗೆ" ನುತ ಎವೆಯಿಕ್ಕದೀಕ್ಷಿಸಿದ. || ೩೭ ||

ಕಂಡನರ್ಜುನನೀ ಕಿರಾತನ |
ಮಂಡೆಯಲಿ ತಾ ಮಳಲ ಲಿಂಗದ |
ಮಂಡೆಯಲಿ ಪೂಜಿಸಿದ ಬಹು ವಿಧ ಕುಸುಮ ಮಂಜರಿಯ. ||
ಕಂಡನಿತ್ತಲು ಮುರಿದು ಪುನರಪಿ |
ಕಂಡನೀ ಶಬರಂಗಿದೆತ್ತಣ |
ದಂಡಿಯೋ? ಹಾ! ಎನುತ ಸೈವೆರಗಾದನಾ ಪಾರ್ಥ. || ೩೮ ||

ಮತ್ತೆ ಕಂಡನು ಖಂಡಪರಶುವಿ |
ನುತ್ತಮಾಂಗದಲೀಚೆಯುಲ್, ಲಿಂ |
ಗೋತ್ತಮಾಂಗದ ಮೇಲೆ ಕಾಣನು ಕುಸುಮ ಮಂಜರಿಯು. ||
ತುತ್ತಿದುವು ಕೌತುಕವ ರಂಜಿಸಿ |
ಹೊತ್ತವದುಭುತವನು ಭಯಾನಕ |
ವೆತ್ತ ರಸದಲಿ ಮುಳುಗಿದುವು ಕಂಗಳು ಧನಂಜಯನ. || ೩೯ ||

ಹೃದಯವಿಬ್ಬಗೆಯಾಯ್ತು. ಕಂಗಳು ।
ಬೆದರಿದುವು. ವೈವರ್ಣ್ಯದಲಿ ತನು ।
ಗದಗದಿಸಿತಡಿಗಡಿಗೆ ಜಡಿದುದು ರೋಮಹರುಷದಲಿ. ॥

ಉದುರಿದುವು ನೇತ್ರಾಂಬು. ಬಿಂಕದ ।
ಬೆದರಿಕೆಯು ಮೂಢತೆಯು ತಿಳಿವಿನ ।
ಮುದದ ಭೇದದ ಗಾಯಘಾತಿಗೆ ಪಾರ್ಥನೊಳಗಾದ. ॥ ೪೦ ॥

ಹರಹಿನಲಿ ಹೊದರೆದ್ದು, ಹರುಷದ ।
ಹೊರಳಿಯಲಿ ಹೊಡಕರಿಸಿ, ಚಿತ್ತವ ।
ತಿರುಹಿ ಹಿಡಿದನು, ಮನಕೆ ಬುದ್ಧಿಯ ಹಮ್ಮು ಹಮ್ಮುಗೆಯ ॥

ಕೊರಳುಗೊಳಿಸಿ, ಕುಲಾಲಚಕ್ರದ । .
ಪರಿಭವಣಿಗೆಯ ಪಾಡಿನಲಿ ಕಾ ।
ತರಿಸುತವನಿಗೆ ಮೈಯನಿತ್ತನು ನೀಡಿ ಭುಜಯುಗವ. ॥ ೪೧ ॥

ಧರಣಿಪತಿ ಕೇಳೀಶನೀತನ ।
ಹೊರಗೆ ಬಿಜಯಂಗೈದು, ಪಾರ್ಥನ ।
ಶಿರವ ಹಿಡಿದೆತ್ತಿದನು; ಬಿಗಿಯಪ್ಪಿದನು ಬರಸೆಳೆದು. ॥

"ಮರುಳು ಮಗನೆ, ಮಹಾತಪಸ್ಸಂ ।
ಚರಣೆಯಲಿ ನೊಂದೈ" ಎನುತ ಕಡು ।
ಕರುಣಿ ಕರುಣಾಮೃತ ಸಮುದ್ರದೊಳದ್ದಿದನು ನರನ. ॥ ೪೨ ॥

ಕೂಡೆ ಮೈದಡವಿದನು ಶೈಮುಂ ।
ಡಾಡಿದನು. "ಮನ ನೋಯದಿರು. ನೀ ।
ಮಾಡಿದುಪಹತಿ ಎಂಬುದೆಮಗರ್ಚನೆ ನಮಸ್ಕಾರ. ॥

ಕೋಡದಿರು ಕೊಂಕದಿರು. ಭಕ್ತಿಗೆ ।
ನಾಡೆ ಮೆಚ್ಚಿದೆ. ನನ್ನ ಚಿತ್ತಕೆ ।
ಖೋಡಿಯಿಲ್ಲಲೆ, ಮಗನೆ, ಗುಹಗಣಪತಿಗಳಾಣೆಂ"ದ. ॥ ೪೩ ॥

"ಸಲಿಸುವೆನು ನೀ ಬೇಡಿದುದ ನಿ ।
ಸ್ಖಲಿತವಂಜದಿರಿನ್ನು, ಸಾಕೆನೆ" ।
"ಸುಲಭ ನೀ ಭಕ್ತರಿಗೆ ಭಯವಿನ್ನೇಕೆ ನಮಗೆ" ನುತ ॥

"ಸಲಿಸು ಪಾಶುಪತಾಸ್ತ್ರವನು; ವೆ ।
ಗ್ಗಳದ ಬ್ರಹ್ಮ ಶಿರೋಸ್ತ್ರವನು ಕೈ ।
ಗೊಳಿಸುವುದು ಕೃಪೆಯುಳ್ಳಡೆಂ"ದನು ನಗುತ ಕಲಿಪಾರ್ಥ. ॥ ೪೪ ॥

ಸರಸಿಯಲಿ ಮಿಂದಾಚಮನ ವಿ ।
ಸ್ತರಣೆ ಎಲ್ಲವ ಮಾಡಿ, ಶೂಲಿಯ ।
ಚರಣದಲಿ ವೈಯಿಕ್ಕಿ ನಿಂದನು ಭಾವಶುದ್ಧಿಯಲಿ. ॥

ಸರಳ ಸಾಂಗೋಪಾಂಗ ಮಂತ್ರೋ
ಚ್ಚರಣ ಸಂವೃತಿವೋಕ್ಷವನು ವಿ।
ಸ್ತರಿಸುತ ರಹಸ್ಯದಲಿ ಕೊಟ್ಟನು ಪಾಶುಪತಶರವ. ॥ ೪೫ ॥

---

# ಇಂದುಮತಿಯ ಸ್ವಯಂವರ.



ಇತ್ತ ರಘುನೃಪನರಸಿ ಗರ್ಭವ ।
ಹೊತ್ತಳಜನಾಮದ ಮುಹೂರ್ತದಿ ।
ಹೆತ್ತಳಾ ಕುವರಂಗೆ ಸಮನಹ ಕುವರನನು, ಬಳಿಕ ॥
ತತ್ತನೂಜಂಗಜನ ನಾಮದ ।
ಪತ್ತುಗೆಯೊಳಜನೆಂಬ ಹೆಸರನೆ ।
ಬಿತ್ತರಿಸಿದನು ರಘುನೃಪಾಲನು ಬಹಳ ವಿಭವದಲಿ. ॥ ೧ ॥

ತಂದೆಯುಜ್ಜ್ವಳವಪ್ಪ ರೂಪವೆ, ।
ತಂದೆಯುತಿಶಯುವಪ್ಪ ಬೀರವೆ, ।
ತಂದೆಯೊಂದುನ್ನತಿಯೆ, ತನಗಳವಡಲು ನಂದನನು ॥
ತಂದೆಯಿಂದೊಂದಿನಿಸು ಬೇರೆಂ ।
ಬಂದಕೆಡೆಯುನು ಕುಡದೆ, ಹೆಜ್ಜೊಡ ।
ರಿಂದ ಹೊತ್ತಿದ ದೀಪದಂದದಿ ಕಾಂತಿಯಾಂತೆಸೆದ. ॥ ೨ ॥

ಇತ್ತಲಿಂತಿರಲತ್ತ ಭೋಜನೃ ।
ಪೋತ್ತಮನು ತನಗನುಜೆ ಎನಿಸಿದ ।
ಮತ್ತಕಾಶಿನಿ ಇಂದುಮತಿಗೆ ವಿವಾಹ ಮಂಗಳವ ॥
ಬಿತ್ತರಿಪ ಬಗೆಯಿಂದ ಪೋಲೆಯ ।
ನಿತ್ತು, ಚರರನು ರಘುನೃಪಾಲಕ ।
ನತ್ತ ಕಳುಹಿದನಜಕುಮಾರನನೊಡನೆ ಕರೆತರಲು. ॥ ೩ ॥

ತನ್ನೆಡೆಗೆ ಚರರೈದಿ ನೀಡಿದ ।
ಬಿನ್ನವತ್ತ್ರಳೆಯನು ವಿಲೋಕಿಸಿ, ।
"ಮನ್ನಣೆಯ ಕೊಳುಕೊಡೆಗೆ ತಕ್ಕವನಿವನು, ಮೇಣಜನು ॥
ಕನ್ನೆಯನು ಕೈವಿಡಿದ ಹರಯದ ।
ಬಿನ್ನಣಿಗನೆಂ"ದರಿದು, ಸೇನೆಯ ।
ಸನ್ನಣದಿ ಕಳುಹಿದನು ಸುತನನು ರಘುನೃಪಾಲಕನು ॥ ೪ ॥

ದಾರಿಯೊಳಗಲ್ಲಲ್ಲಿ ನಿಲಿಸಿ ।
ದೋರ್ರಣದ ಗೂಡಾರದೊಳು ಪರಿ ।
ಚಾರರೆಸಗಿದ ನವ್ಯರಾಜಾಹೋರ್ಪಚಾರದಲಿ, ॥
ಊರುಗರು ತಂದೊಪ್ಪಿಸಿದ ನವ ।
ಸಾರಫಲದುಲುಪೆಯಲಿ, ಪಥಸಂ ।
ಚಾರವೇ ನಂದನವಿಹಾರವದೆನಿಸಿತಾತಂಗೆ. ॥ ೫ ॥

ಊರ ಸನಿಯವನಜನೃಪಾಲನು ।
ಸಾರವಂದುದನರಿದು, ಮನದಲಿ ।
ಮೀರಿದಾನಂದದಲಿ ಮಗಧಾವನಿಪನಿದಿರ್ವಂದ. ॥
ಭೂರಿಕಲೆಗಳನಖಿಳ ದೆಶೆಯಲಿ ।
ಬೀರುವಾ ಚಂದ್ರಮನನೀಕ್ಷಿಸಿ, ।
ಮೀರಿ ತೆರೆನುಸಗುವ ಮಹಾರ್ಣವದೊಂದು ಬೆಡಗಿನಲಿ. ॥ ೬ ॥

ಬಂದು ನಲವಿಂದಜನ ಮುಂಗಡೆ ।
ನಿಂದು, ಮನ್ನಣೆಗೈದು, ತಾನೇ ।
ಮುಂದೆ ನಡೆಯುತ, ರಾಜಧಾನಿಗೆ ನೃಪನ ಕರೆದುಯ್ದು, ॥
ಹಿಂದೆ ಪರುಟವಿಸಿದ್ದ ಮಂಜುಳ ।
ಮಂದಿರಕೆ ನಡೆತಂದನಲ್ಲಿಯ ।
ಮಂದಿ ಅಜನೇ ರಾಜನೆನುತ ವಿಭಾವಿಸುವ ತೆರದಿ. ॥ ೭ ॥

ಇರುಳು ಕಳೆದುದು, ದೇವ, ಸಜ್ಜೆಯು।
ತೊರೆದು ನೀನುಪ್ಪವಡಿಸವನೀ।
ಭರವನಂಬುಜಭವನು ನಿಮ್ಮಿಬ್ಬರಲಿ ಹಂಚಿದನು॥
ಸರಿಹಸುಗೆಯಲಿ ನಿನ್ನ ಗುರುವಾ।
ಸೆರಗಿನಲಿ ಧರಿಸಿದನು ನೀನೀ।
ಸೆರಗಿನಲಿ ಹೆಗಲಿತ್ತು ತಾಳುವುದುಳಿದ ಭಾರವನು. ॥ ೮ ॥

ಎರಡು ವಸ್ತುಗಳೊಂದೆ ಸಮಯದೊ।
ಳರಳಿ ಕಣ್ಗೆನಿದೆನಿಸಿ ಓರೊಂ।
ದರಲಿ ಸಮತೆಯನಾಂತು ಕೈಸೆರೆಗೊಳಲಿ ಪೊಸಸಿರಿಯ॥
ಕಿರುನಗೆಯ ಸಿರಿವೆರೆದ ನಿನ್ನಯ।
ತರಳ ತಾರಕವೆನಿಪ ಲೋಚನ।
ಸರಸಿಜಮುಮಾ ಭ್ರಮರಮುದರದಿ ಚರಿಪ ಸರಸಿಜವು. ॥ ೯ ॥

ಅರಸ, ನಿನ್ನಯ ಸುಯ್ಯ ಸಾಜದ।
ಪರಿಮಳವನನ್ಯರ ಗುಣಂಗಳ।
ನೆರವಿನಲಿ ಕೈಕೊಳಲು ಬಯಸಿದ ತೆರದಿ ತಂಗಾಳಿ॥
ಮರಗಳಲಿ ತೊಟ್ಟುಡಿದ ಹೂಗಳ।
ಹೊರಳಿಗಳನಪ್ಪುವುದು ಮುಂಬಗ।
ಲರುಣಕಿರಣದೊಳಲರ್ದ ತಾವರೆಗಳನು ತಳ್ಕಿಪುದು. ॥ ೧೦ ॥

ಕೆಂದಳಿರ ದೊಂದುಳಿಯ ಮಾಣಿಕ।
ದಂದದೆಳಗೆಂಪಾಂತ ಪುಟದಲಿ।
ಸಂದ ಮುತ್ತಿನ ತತ್ತಿಯೆನಿಸುವ ಮಂಜಿನುರುಳಿಗಳು॥
ಬಂದಿವಿಡಿವುವು ಬಗೆಯನುದಿಸುವ।
ಮಂದಹಸನದಿ ಚೆಂದುಟಿಯೊಳಿರ।
ಪೊಂದಿ ಸುಂದರವಾದ ನಿನ್ನಯ ದಂತಕಾಂತಿವೊಲು. ॥ ೧೧ ॥

ತರಣಿ ಅಡಿಯಿಡಲೊಡರಿಸದ ಮು ।
ನ್ನರುಣನೈತಂದಂಬರದೊಳಿಡಿ ।
ದಿರ್ದ ಕತ್ತಲೆ ಎಲ್ಲವನು ಕೊತ್ತಿದನು ನಿಮಿಷದಲಿ; ॥
ಅರಿವಿಮರ್ದನ, ನೀನು ಸಮರದ ।
ಹರಿಬದಲಿ ಮುಂಗಡೆಯುಲೈದುತೆ ।
ಗುರುಗೆ ಪಗೆಯನು ಕೊಲ್ಲ ಪಾಡನು ಮಾಣಿಸುವ ತೆರದಿ. ॥ ೧೨ ॥

ಔಂಕುತೆರಡುಂ ಪಕ್ಕಗಳನಿದೆ ।
ತೂಂಕಡನು ನೂಂಕುತ್ತೆ ಕುಕಿಲುವ ।
ಸಂಕಲೆಯ ಸರಪಳಿಯ ಸೆಳೆಯುತ ಎದ್ದುವಾನೆಗಳು; ॥
ಪಂಕಜಾಪ್ತನ ಕುಂಕುಮಾಂಶುವ ।
ಸೋಂಕಿನಲಿ ಸೊಗಸಾಗಿ ದಂತಗ ।
ಳಂಕುರಂಗಳು ಗೈರಿಕದ ಗಿರಿತಟವನೊಡೆದಂತೆ. ॥ ೧೩ ॥

ಓಸರಿಸಿದುವು ನಿದ್ರೆಯನು ಪಟ ।
ವಾಸದೆಡೆಯಲಿ ಬಿಗಿದು ಕಟ್ಟಿದ ।
ಭಾಸುರವನಾಯುಜದ ತುಂಗ ತುರಂಗಸಂಘಗಳು. ॥
ಸೂಸುಸುಯ್ಲಿನ ಬಾಷ್ಪಭರದಲಿ ।
ಮಾಸಿಸುತ ಮುಂಗಡೆಯೊಳುಣಲೆನೆ ।
ರಾಶಿಯೊಟ್ಟಿದ ಸಾರಸೈಂಧವ ಶಕಲ ಸಂಕಲವ. ॥ ೧೪ ॥

ಎಂದು ಸವಿನುಡಿಯಿಂದ ಹಾಡುವ ।
ವಂದಿಪುತ್ರರ ಹಾಡು ಮೆಲ್ಲನೆ ।
ಬಂದು ಕಿವಿಯನು ಜಕ್ಕುಲಿಸಲುಪ್ಪವಡಿಸಿದನವನು; ॥
ಸಂದಣಿಸಿದಂಚೆಗಳ ಸವಿಯುಲಿ ।
ಯಿಂದ ಗಂಗೆಯ ಮಣಲ ಮೆಲ್ಬಾ ।
ಸಿಂದ ಉಪ್ಪವಡಿಸುವ ಮಂಜುಳ ಸುಪ್ರತೀಕವೆನೆ. ॥ ೧೫ ॥

ಪುರುಷಭಿಕ್ಷವ ಬೇಡಿದ್ದೈಸರ ।
ನರಸಿಯುಳಲಿಗೆ ಮರುಗಿ, ಗಿರಿಶನೆ ।
ಕರುಣಿಸಿದನೋ ಮತ್ತೆ ಮದನಂಗೊಡಲನೆಂಬಂತೆ; ॥
ಮೆರೆವ ಕಮನೀಯಾಂಗದಜ ನೃಪ ।
ವರನ ಪುಗಿಲೊಳಗರಸುಮಕ್ಕಳು ।
ತೊರೆದರೊರ್ಮೋದಲಿಂದುಮತಿಯನು ವರಿಸುವಾಸೆಯನು. ॥ ೧೬ ॥

ಬಳಿಕಮಜನಾ ಭೋಜಭೂಪತಿ ।
ಒಲಿದು ತೋರಿದ ರತ್ನಮಂಚದ ।
ತಳವನಡರ್ದನು ಕನಕಸೋಪಾನಗಳ ಮಾರ್ಗದಲಿ; ॥
ಶಿಲೆಗಳೊಳಗಡಿಯಿಡುತ ತುಂಗಾ ।.
ಚಲದ ಶಿಖರಸ್ಥಳಕೆ ಮೆಲ್ಲನೆ ।
ತಳರ್ವ ಕಂಠೀರವಕಿಶೋರದ ನಡೆಯ ಬೆಡಗಿನಲಿ. ॥ ೧೭ ॥

ಪರಿಪರಿಯ ಬಣ್ಣಗಳ ಬೆಡಗಿನ ।
ಸಿರಿಯ ಮೆಲ್ವಾಸುಗಳ ಕಾಂತಿಯ ।
ಹರಹುಗಳ ಮಂಚದಲಿ ಮಂಡಿಸಿದಜನೃಪಾಲಕನು; ॥
ತೆರೆದ ಸಾಸಿರಗಣ್ಣ ಹೀಲಿಯ ।
ಬೆರಕೆವಣ್ಣದ ನುಣ್ಣಿದಿರ ಸಿಂ ।
ಗರದ ನವಿಲಿನ ಬೆನ್ನನೇರಿದ ಕಂದನವೊಲೆಸೆದ. ॥ ೧೮ ॥

ತುಂಗಪೀಠದೊಳೊಪ್ಪಿ ಪಸದನ ।
ಸಿಂಗರದೊಳೆಸೆವರಸುಮಕ್ಕಳ ।
ವಂಗಡದ ಮಧ್ಯದೊಳಗಜನೃಪನೊರ್ವನೇ ಜನದ ॥
ಕಂಗೆವಂದನು ಕಾಂತಿಲಹರಿಯ ।
ಸಂಗದಲ್ಲಿ ಕಲ್ಪಾವನೀಜದ ।
ಜಂಗುಳಿಯ ಮಧ್ಯದಲಿ ಮಿರುಗುವ ಪಾರಿಜಾತವೆನೆ. ॥ ೧೯ ॥

ಕುಸುಮುಕುಲದಿಂ ರಂಜಿಸುವ ತರು ।
ವಿಸರವನು ಬಿಸುಟಳಿಗಳೊರ್ಮೆಯೆ ।
ಮಿಸಗಿ ಮದಜಲ ಉಗುವ ಕಾಡಾನೆಯು ಕಪೋಲದಲಿ ॥
ಮುಸುರುವಂದದಿ, ಬಿಸುಟು ನೃಪಸುತ ।
ವಿಸರವನು ಜನನಯುನಸಂತತಿ ।
ಮುಸುರಿ ಮುತ್ತಿತು ರಘುನೃಪಾಲಕುಮಾರನಂಗದಲಿ. ॥ ೨೦ ॥

ಇಂತು ನರಪತಿ ಸುತರು ತಂತ ।
ಮ್ಮಂತರಂಗವನರುಹುತಿರೆ, ನೃಪ ।
ಸಂತತಿಯ ಚರಿತೆಗಳನೆಲ್ಲವನರಿದ ಪಡಿಯರಿತಿ ॥
ಮುಂತೆ ಮಗಧೇಶ್ವರನ ಬಳಿಗಾ ।
ಕಾಂತೆಯನು ಕೈಗೊಟ್ಟು ಕರೆದು ।
ಯ್ದಿಂತು ಬಿನ್ನವಿಸಿದಳು ಬಿನ್ನಣಮಾತಿನೆಸಕದಲಿ. ॥ ೨೧ ॥

ಮರೆಹುಗುವ ಬಡವರಿಗೆ ತಾನೇ ।
ಶರಣನೆನಿಸುವಗಾಧಸತ್ವದ ।
ಗರುವನೀತನು, ಮಗಧನಾಥನು, ಮುಂದಿಯನು ಹೊರೆವ ॥
ಬಿರುದಿನಾತನು, ವೈರಿವರ್ಗವ ।
ನುರುಹಿ ಸುಟ್ಟುದರಿಂದ ಪಡೆದನು ।
ಪುರುಳನೊಳಕೊಂಡಾ ಪರಂತಪನೆಂಬ ನಾಮವನು. ॥ ೨೨ ॥

ಇರಲಿ ಸಾಸಿರ ಲೆಕ್ಕದಲ್ಲಿ ಭೂ ।
ವರವೆಸರನಾಂತವರು! ಧರಣಿಗೆ ।
ದೊರೆದುದಿವನಿಂದಲ್ತೆ ರಾಜನ್ವತಿ ಎನಿಪ ಹೆಸರು! ॥
ಗರಗಳುಂ ತಾರೆಗಳುಮಿಡಿದಂ ।
ಬರವ ತುಂಬಿದರೇನೊ, ಚಂದ್ರನ ।
ಕಿರಣವಲ್ಲವೆ ರಾತ್ರಿಯನು ಬೆಳ್ಪಕ್ಕವೆನಿಸುವುದು? ॥ ೨೩ ॥

ಏಣಲೋಚನೆ, ಇವನ ಪಟ್ಟದ ।
ರಾಣಿಯುಪ್ಪೊಡಿವಂಗೆ ನಿನ್ನೀ ।
ಪಾಣಿಪಲ್ಲವವನು ಸಮರ್ಪಿಸಿ, ಕುಸುಮಪುರವರದ ॥
ಶ್ರೇಣಿಯುಪ್ಪರಿಕೆಯ ಗವಾಕ್ಷದ ।
ಜಾಣೆಯರ ಕಣ್ಗಳಿಗೆ ನೀಂ ಕ ।
ಲ್ಯಾಣವನು ಕೈಗೊಳಿಸಿ ಕೂಡಿಸು ಸಫಲತೆಯ ಸಿರಿಯ. ॥ ೧೪ ॥

ಎಂದೆನುತ ಪಡಿಯರಿತಿ ನುಡಿದೊಡ ।
ನಿಂದುಮತಿ ನೃಪತಿಯನು ಕಡೆಗ ।
ಣ್ಣಿಂದ ನೋಡುತ, ಕೊರಲ ನವ್ಯ ಮಧೂಕಮಾಲಿಕೆಯ ॥
ಒಂದಿನಿಸು ತೊನೆಯಿಸುತ, ಭಾವದೊ ।
ಳೊಂದುಮೆರೆಯದ ಮೌನಮುದ್ರೆಯ ।
ವಂದನೆಯನೋಲಗಿಸಿ ಮುಂದಕೆ ಗುಜ್ಜುಮೆಟ್ಟಿದಳು. ॥ ೧೫ ॥

ಮಡದಿಯಾಪರಿ ನಡೆಯೆ, ಕಂಬಿಯ ।
ಪಡಿಯರಿತಿ ನಡೆತಂದು, ಕಾಂತೆಯ ।
ನೊಡನೆ ಕರೆದೈದಿದಳು ನೃಪನೆಡೆಯಿಂದ ನೃಪನೆಡೆಗೆ; ॥
ಜಡರುಹದ ಬಳಿಯಿಂದ ಜಡರುಹ ।
ದೆಡೆಗೆ ಮಾನಸರಾಜಹಂಸಿಯ ।
ನೊಡನೆ ಕೊಂಡುಯ್ವನಿಲಜನಿತತರಂಗಮಾಲೆವೊಲು. ॥ ೧೬ ॥

ತಂಗೀ, ನೋಡೀ ತುಂಗಬಾಹುವ ।
ನಂಗನೃಪನಿವನಂಗವಟ್ಟದ ।
ಭಂಗಿಗಮರಾಂಗನೆಯರೇ ಕಣ್ಸೋತು ಕಾಡಿದರು. ॥
ಅಂಗವರಿದವರಿಂದ ತುಂಗ ಮ ।
ತಂಗಜಂಗಳನೊಲಿಸಬಲ್ಲನಿ ।
ವಂಗೆ ಸುರಪುಂಗವನ ಸಂಪದವಿಲ್ಲಿ ಸಲ್ಲುವುದು. ॥ ೧೭ ॥

ಒಂದು ತಾಣದೊಳೊರ್ವರ್ಯುಂ ತಾ ।
ವೊಂದುವೆರೆದಿರರೆಂಬ ಮಾತಿಗೆ ।
ಸಂದ ಸರಸತಿ ಸಿರಿಗಳಿವನೊಳಗೊಂದುವೆರೆದಿಹರು, ।
ಸಂದ ಕಾಂತಿಯೊಳೊಂದಿ ಪುಸಿಯೊಳ ।
ಗೊಂದದೋಳ್ನುಡಿವಡೆದ ನೀನೇ ।
ಸುಂದರೀಮಣಿ, ತಕ್ಕಳವರೊಡನೊಂದುಗೂಡುವೊಡೆ. ॥ ೨೮ ॥

ಎಂದ ನುಡಿಯನು ಕೇಳಿ, ನೃಪಸುತ ।
ನಿಂದ ನಯನವ ಸೆಳೆದು, ಮೆಲ್ಲನೆ ।
"ಮುಂದೆ ನಡೆ" ಎಂದಾ ಸುನಂದೆಗೆ ಬೆಸಸಿದಳು ಕೂಡೆ ॥
ಸುಂದರನು ತಾನಲ್ಲದಿಲ್ಲವ ।
ನಂದವರಿದವಳಲ್ಲದಿಲ್ಲವ ।
ಳೆಂದೊಡೇಂ ಮೆಚ್ಚಿದಳೆ? ಲೋಕವೆ ಭಿನ್ನರುಚಿಯಲ್ತೆ! ॥ ೨೯ ॥

ಬಳಿಕಲಾ ಪ್ರತಿಹಾರಿ ತೋರಿದ ।
ಳಳವಿಗಳಿದದಟಿಂದ ಶಾತ್ರವ ।
ಕುಳಕೆ ದುಸ್ಸಹನಾಗಿ, ತನ್ನನು ನೋಡುವರ ಕಣ್ಗೆ ॥
ಕುಳಿರ್ವ ಕಪ್ಪುರವುಡಿಯನೊಪ್ಪಿಸು ।
ವಿಳೆಯರಸನನು ಕಳೆಯ ಬಳಗದಿ ।
ತಳತಳಿಸಿ ಮೈದೋರ್ವ ತಿಂಗಳನೆಳಸಿ ತೋರ್ಪಂತೆ. ॥ ೩೦ ॥

ಇವನವಂತೀಶ್ವರನು, ನಿಡುದೋ ।
ಳವನು, ಹೇರುರದವನು, ತೆಳ್ನಡು ।
ವವನು, ಮುಂಗಡೆ ಸಂಗಳಿಸುವನು ಕಣ್ಗೆ ಕೌತುಕವ— ॥
ರವಿಯನಂದಾ ವಿಶ್ವಕರ್ಮನು ।
ಜವದೆ ತಿರುಗುವ ಸಾಣೆವಾಯಲಿ ।
ಸವೆಯ ಕೀಸುವ ಪದದೊಳುದಯಂಬಡೆದ ಪಾಂಗಿನಲಿ. ॥ ೩೧ ॥

ಎಂದೆನುತ ಪಡಿಯರಿತಿ ನುಡಿದೊಡ ।
ವಿಂದುಮತಿಯಾ ಬಂಧುಪದ್ಮಾ ।
ನಂದನನು ವಿಕ್ರಮಿವಿಶೋಷಿತಶತ್ರುಪಂಕನನು ॥
ಒಂದುವೊಡೆ ಬಗೆದಂದಳಿಲ್ಲರ ।
ವಿಂದಬಂಧುವಿನಲ್ಲಿ ಭಾವವ ।
ನೊಂದಿಸದೆ ಪಿಂದೆಗೆವ ಕೋಮಲಕುಮುದಿನಿಯ ತೆರದಿ. ॥ ೩೦ ॥

ಜ್ವಲನನಿವನನು ಕೊಳುಗುಳದ ಕಳ ।
ನೊಳಗೆ ಕೆಳೆಯಂತೋಲಗಿಸಿ ಮಾ ।
ರ್ಮಲೆವ ರಿಪುಗಳನುರುಪುವನು ತಾನೆಂದೊಡೀ ನೃಪನು; ॥
ಉಳಿದ ನೃಪರಿಗೆ ಕಾಳರಾತ್ರಿಯ ।
ವೊಲು ವಿರಾಜಿಪ ಪರುಶುರಾಮನ ।
ತಳದ ಕೊಡಲಿಯು ಬಾಯನಂಬುಜದೆಸಳಿಗೊರೆಯೆಂಬ. ॥ ೩೩ ॥

ತಂಗಿ, ನೀಂ ಮಾಹಿಷ್ಮತೀನಗ ।
ರಾಂಗನೆಯ ನವಕಾಂಚಿಯಂದದಿ ।
ಕಂಗೊಳಿಪ ನರ್ಮದೆಯ ನಿರ್ಮಳಜಳದ ವೇಣಿಯನು ॥
ತುಂಗಹರ್ಮ್ಯಾಳಿಯಲಿ ನಿಂದು ಕ ।
ಡಂಗಿ ನೋಡುವ ಬಯಕೆ ಪಡೆದರೆ ।
ತುಂಗ ಭುಜನುತ್ಸಂಗದಲಿ ಸಿರಿಯಾಗಿ ಕಂಗೊಳಿಸು. ॥ ೩೪ ॥

ಗಾಡಿಕಾತಿಯು ನಯನಕಾತನ ।
ಗಾಡಿ ಸವಿಯನು ಸೂಸಿದೊಡವೊಡ ।
ಗೂಡಿಸಿದುದಿಲ್ಲವಳ ಹೃದಯದಿ ವರಿಸುವಾಸೆಯನು ॥
ಮೂಡಿದಾ ಶರದದಲಿ ಮುಗಿಲುಗ ।
ಳೋಡಿ ನಿರ್ಮಲವಾದ ನಭದಲಿ ।
ಗಾಡಿನಡೆದೆಸೆವಿಂದು ನಳಿನಿಗೆ ರುಚಿಸದಂದದಲಿ. ॥ ೩೫ ॥

ನೀಪವಂಶದೊಳುದಿಸಿದವನೀ ।
ಭೂಪನೀತನ ಯಜ್ಞಧೂಮದ ।
ಧೂಪದಲಿ ಪರಿಮಳಿತವಾದುವು ದೆಸೆಗಳೀತನಲಿ; ॥
ಕಾಪುಗೊಂಡು ಗುಣಂಗಳುಳಿದುವು ।
ರೂಪಿಸುವ ನಿಜವೈರವನು ತವೆ ।
ತಾಪಸರ ಬಳಿಯೊಳಗೆ ಪಗೆಯುಗುವಂತೆ ಸತ್ವಗಳು. ॥ ೩೬ ॥

ಇಂದುಮುಖಿ, ಗೋವರ್ಧನಾದ್ರಿಯ ।
ಕಂದರದಿ ಜಲಬಿಂದು ಕುಲದಲಿ ।
ನಾಂದು, ಶೈಲೇಯದ ಸುಗಂಧವನುಗುಳ್ವ ಹಾಸರೆಯ ॥
ಸಂದ ಶೀತದಿ ಮುಂಡಿಸುತ ನಲ ।
ವಿಂದ ನೋಡಾಕಾರವೊಗದೊಳ ।
ಗಂದವಿಗೆ ಕುಣಿಕುಣಿವ ನವಿಲಿನ ನವ್ಯ ನೃತ್ತಗಳ. ॥ ೩೭ ॥

ಕೆಳದಿ ಇಂತೆನೆ ಸುಳಿಯ ಕೂದಲ ।
ಚೆಲುವೆಯಾನೃಪತಿಲಕನನು ಪಿಂ ।
ದುಳಿದು ನಡೆದಳು ಮುಂದೆ ವರನನು ವರಿಸುವಳ್ತಿಯಲಿ — ॥
ಜಳನಿಧಿಯ ಬಳಿಗೈದಿ ಪೋಗುವ ।
ಪೊಳೆ ತನಗೆ ಮಾರ್ಗದಲಿ ಸಿಲುಕಿದ ।
ಬಳಿಯ ಬೆಟ್ಟವನುಳಿದು ಮುಂದಕೆ ಸರಳಿಸುವ ತೆರದಿ. ॥ ೩೮ ॥

ಮುಂಗಡೆಯೊಳಂಗದದ ಸಂಗದಿ ।
ಕಂಗೊಳಿಸುವುತ್ತುಂಗಭುಜದ ಕ ।
ಳಿಂಗ ಭೂಮಿಪನೆನಿಪ ಹೇಮಾಂಗದನ ಗದ್ದುಗೆಯ ॥
ಮುಂಗಡೆಗೆ ನಡೆದಲ್ಲಿ ನಿಂದಳು ।
ರಂಗಲಾಂಛನ ವದನೆಗಾವೃದು ।
ಲಾಂಗಿ ಬಿನ್ನವಿಸಿದಳು ತನ್ನೃಪವರನ ಗುಣಗಣವ. ॥ ೩೯

ನರಪನಿವನರಮನೆಯು ಜಾಲಂ ।
ದರಗಳೆಡೆಯಿಂ ನೋಡಲಪ್ಪುದು ।
ತೆರೆಯ ತುರುಗುಲನೆನಿಸಿ ಸನಿಯದೊಳೆಸೆವ ಸಾಗರವು. ॥
ಮೊರೆವ ಮಂದ್ರನಿನಾದದಿಂದೊ ।
ತ್ತರಿಸಿ, ಯಾಮದ ತೂರ್ಯಗಳನೆ ।
ಚ್ಚರಿಸುತಿರ್ಪುದು ರಾಣಿವಾಸದಿ ಮಲಗಿದೀತನನು. ॥ ೪೦ ॥

ನೀಲಕುಂತಳೆ, ಇವನೊಳೊಲವನು ।
ತಾಳಿ, ತಾಳೆಯ ಕಾಡ ಮರ್ಮರ ।
ದೇಳಿಗೆಯ ಜಲನಿಧಿಯ ತಟದಲಿ ನಲಿವ ಕುರುವಗಳ ॥
ಸಾಲಿನಿಂದ ಲವಂಗ ಲತೆಗಳ ।
ಮಾಲೆಹೂಗಳ ಪರಿಮಳವ ತಂ ।
ದೊಲಗಿಸುವೆಲರಿನಲಿ ತೊಲಗಿಸು ತಳ್ತ ಬೆಮರ್ವನಿಯ. ॥ ೪೧ ॥

ದೂತಿಯಿಂತಿಂತೆದೆವುಗುವ ಸವಿ ।
ಮಾತುಗಳನಾಡಿದೊಡಮಾ ರೂ ।
ಪಾತಿಶಯಡ ವಿದರ್ಭಧರಣೀಪಾಲ ಸಹಜಾತೆ ॥
ಆತನನು ಹಿಂದುಳಿದು ನಡೆದಳು; ।
ನೀತಿಯಿಂ ಬಳಿಸಾರ್ದ ಜಲನಿಧಿ ।
ಜಾತೆ ಹತಭಾಗ್ಯನನು ನೀಗುತ ಸಾಗುವಂದದಲಿ. ॥ ೪೨ ॥

ಅಂಬುಜಾಂಬಕಿ, ನೋಡು, ನಿಜ ಭುಜ ।
ಲಂಬಮುಕ್ತಾಸರನು, ಕಂಪಿನ ।
ತೂಂಬನೆತ್ತುವ ಚಂದನದ ಚರ್ಚೆಗಳ ಸೊಗಸಿಗನು; ॥
ಕಂಬೊಲದೊಳಿದೆ ಪಾಂಡ್ಯನೊಪ್ಪುವ ।
ನಂಬುಜಾಪ್ತನ ಚೆಂಬೊಗರ ಸಿರಿ ।
ಗಿಂಬೆನಿಸಿ ನಿರ್ಝರದಿ ಮಿರುಗುವ ಗಿರಿಯ ತೆರದಿಂದ. ॥ ೪೩ ॥

ನೀಲಕುಂತಲೆ, ಮೇಲಡರ್ವ ತಾಂ ।
ಬಾಲವಲ್ಲಿಯ ತಳ್ಕಿಯಲಿ, ಕ ।
ಲ್ಲೋಲಗಳನೋಲಗಿಪ ಕೌಂಗಿನ ಮಾಲೆಯೇಲೆಗಳ ॥
ಸಾಲನಾಲಿಂಗಿಸಿದ ಚಂದನ ।
ದೋಳಿಗಳ ಲೀಲೆಗಳ ಮಲಯ ವ ।
ನಾಳಿಯೊಳಗೆ ತಮಾಲಪತ್ರದ ತಲ್ಪದಲಿ ಸುಖಿಸು. ॥ ೪೪ ॥

ಪಡಿಯರಿತಿ ಇಂತೊರೆದ ನಲ್ಮೆಯ ।
ನುಡಿಗಳೆಡೆಯನು ಪಡೆದುವಿಲ್ಲಾ ।
ಪಿಡಿಯ ಬೆಡಗಿನ ನಡೆಯ ಮಡದಿಯ ಹೃದಯಮುಕುಲದಲಿ; ॥
ಜಡಜಸಖನಸ್ತಮಯ ಸಮಯದಿ ।
ಪಡಿಯನಿಕ್ಕಿದ ತಾವರೆಯೊಳೆಡೆ ।
ವಡೆಯದಂದದೊಳಿಂದು ಬಿಂಬದ ಸಾಂದ್ರಕಿರಣಗಳು. ॥ ೪೫ ॥

ಇರುಳಿನಲಿ ಸಂಚರಿಪ ದೀಪಾಂ ।
ಕುರದವೊಲು, ಹರಿಣಾಕ್ಷಿಯಾವಾ ।
ವರಪನನು ಹಿಂದುಳಿದಳಾ ಆ ಧಾರಿಣೀಶ್ವರನು ॥
ತೊರೆದ ಕಳೆಯು ವಿವರ್ಣಭಾವದ ।
ಮರುಕದಲಿ ಕಂದಿದನು ನಿಶೆಯಲಿ ।
ಧರಣಿಪತಿ ಸಂಚರಿಪ ಮಾರ್ಗದ ಮಾಡಗಳ ತೆರದಿ. ॥ ೪೬ ॥

ಅಂತವಳು ತನ್ನೆಡೆಗೆ ನಡೆತರೆ ।
ಚಿಂತೆಯಾಂತನು ನೃಪಕುಮಾರನು ।
"ಕಾಂತೆ ನನ್ನನು ವರಿಸುವಳೊ ಮೇಣ್ವರಿಸಳೋ" ಎನುತ. ॥
ಅಂತು ತಪಿಸುತ ಕಳವಳಿಸುವಜ ।
ನಂತರಂಗದ ಸಂಶಯವನಳಿ ।
ವಂತೆ ಮಾಡಿದುದವನ ದಕ್ಷಿಣಬಾಹುವಿಸ್ಫುರಣ. ॥ ೪೭ ॥

ಕುಂದುಕೊರತೆಗಳಿಲ್ಲದಾತನ |
ಸುಂದರಾಂಗದ ಸೊಬಗನೀಕ್ಷಿಸಿ |
ಇಂದುಮತಿ ಬೇರೊಂದನೀಕ್ಷಿಸಲಾಟಿಸಿದಳಿಲ್ಲ. ||
ಬಂದ ಮಾವಿನ ನಗುವ ಹೂವಿನ |
ಸಂದ ಸೊಗಸನು ಕಂಡ ತುಂಬಿಯು |
ದೆಂದುಮೆಡೆಯುಲಿ ನೆನೆವುದೇ ಬೇರೊಂದು ಭೂರುಹವ? || ೪೪ ||

ಆ ನೆಗಳ್ದ ರಘು ಭೂಮಿಪಾಲಗೆ |
ಸೂನುವೆನಿಸಿದನಜನೃಪಾಲನು, |
ಸೂನುವಾದಂತಾ ಜಯಂತನು ದೇವರಾಜನಿಗೆ, ||
ಆನುವನು ತಂದೆಯುವೊಲಿಳೆಯನು |
ತಾನುಮೊಯಜನೃಪನು ಹೋರಿಯು |
ಮಾನುವಂತಾ ಗೂಳಿ ತಾಳುವ ಭೂರಿಭಾರವನು. || ೪೯ ||

ಕುಲದ ಕಾಂತಿಯು ವಯದ ವಿನಯದಿ |
ಕಲೆತ ಗುಣಗಣದೈಸಿರಿಗೆ ತಾ |
ಯ್ನೆಲೆಯೆನಿಸಿ ಬೆಲೆವೆತ್ತು ನಿನ್ನೊಳಗೋಲಗೆಯು ಪಡೆವ ||
ಚೆಲುವುವಡೆದೀ ನೃಪಕುಮಾರಕ |
ತಿಲಕನನು ಕೈವಿಡಿದು ಕರುಣಿಸಿ |
ಸಲಿಸು ರತ್ನಕೆ ಚಿನ್ನದೊಡನೊಡವೆರೆವ ಸಂಪದವ. || ೫೦ ||

ಎಂದು ತನಗೆ ಸುನಂದೆಯೊರೆದುದ |
ನಿಂದುಮತಿಯಾಲಿಸುತ ಮಿಗುವೊಲ |
ವಿಂದ ಲಜ್ಜೆಯನಿನಿಸಡಂಗಿಸಿ ನಗುವ ನಯನಗಳ ||
ಕಂದದಿಂದೀವರದ ಮಾಲೆಯು |
ನಂದ ಮಿಗೆ ನೃಪನಂದನನ ಗೆರೆ |
ಯಿಂದ ರಾಜಿಪ ಕಂಧರದಿ ಕೈಕೊಳಿಸಿ ವರಿಸಿದಳು. || ೫೧ ||

ಅಂತವಳು ಮನಸೋತು ನೃಪತಿಯ ।
ಮುಂತೆ ನಿಲೆ ನಗೆಮೊಗದ ಸೊಬಗಿನ ।
ಸಂತಸದಿ ಪಡಿಯರಿತಿ ನೃಪತನುಭವೆಯನೀಕ್ಷಿಸುತ ॥
ಅಂತರಂಗಕೆ ಸೊಗಸದಿದ್ದರೆ ।
ಮುಂತೆ ನಡೆದಪೆವೆಂದೆನಲು ನಯ ।
ನಾಂತಕುಟಿಲವಿಲೋಕನದಿ ನೃಪತನುಜೆ ನೋಡಿದಳು. ॥ ೫೨ ॥

ಮಂಗಳದ ಪರಿಮಳದ ಪುಡಿಯಲಿ ।
ಸಂಗಳಿಸಿ ಕೆಂಗುಡಿಯ ಕಳದಳೆ ।
ದಂಗವಡೆದನುರಾಗವೆನೆ ಕಂಗೊಳಿಪ ಮಾಲೆಯನು ॥
ಅಂಗನಾಮಣಿ ತನ್ನ ಸಖಿಯ ಕ ।
ರಂಗಳಿಂದಾ ತುಂಗಭಜನ ಮ ।
ನಂಗೊಳಿಪ ಕಂಠದಲಿ ಸಿಂಗರಗೊಳಿಸಿದಳು ಬಳಿಕ. ॥ ೫೩ ॥

ಮುಗಿಲ ಮುಸುಕನು ಬಿಸುಟ ಶಶಿಯನು ।
ತೆಗೆದು ತಳ್ಕಿಸಿದಿಂದು ಕಾಂತಿಯೊ? ।
ಬಗೆವುಗುವ ತೊರೆಯೆರೆಯನೊಡವೆರೆದೆಸೆವ ಸುರನದಿಯೊ? ॥
ಸೊಗಸುವೀಸಮುಗುಣರ ಯೋಗದ ।
ಬಗೆಯ ಬಣ್ಣಿಸಲರಿದೆನುತ ನಾ ।
ಡುಗರೊರೆವ ನುಡಿಯಿರಿದುದವನೀಥವರ ಕೊಡಕೆಗಳ. ॥ ೫೪ ॥

ಒಂದು ಕಡೆಯಲಿ ವರನ ಪಕ್ಕದ ।
ಮಂದಹಾಸದ ಮೊಗದ ಮುಂದಿಗ ।
ಳೊಂದು ಕಡೆಯಲಿ ಕಂದುಮೋರೆಯ ನೃಪನ ಮಂದಿಗಳು ॥
ಸಂದಣಿಸೆ ಸಭೆ ಸೊಗಸಿತುಪಮೊಳ ।
ಗೊಂದು ಕಡೆಯಲಿ ನಗುವ ಕಮಲಗ ।
ಳೊಂದು ಕಡೆಯಲಿ ಮುಗಿವ ನಳಿನಗಳೆಸೆವ ಕೊಳದಂತೆ. ॥ ೫೫ ॥

